# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೮, ೨೦೧೪ (ಭಾದ್ರಪದ ೨೭, ಶಕ ವರ್ಷ ೧೯೩೬)<br>Bangalore, Thursday, September 18, 2014 (Bhadrapada 27, Shaka Varsha 1936) | ಸಂಚಿಕೆ ೩೮<br>Issue 38 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಹುಬ್ಬಳ್ಳಿ–ಧಾರವಾಡದಲ್ಲಿ ಬಿ.ಆರ್.ಟಿ.ಎಸ್. ಕಂಪನಿ ಲಿಮಿಟೆಡ್ ಕಾರ್ಪೋರೇಟ್ ಕಚೇರಿ ನಿರ್ಮಿಸಲು ಹುಬ್ಬಳ್ಳಿ ತಾಲ್ಲೂಕಿನ ಅಮರಗೋಳ ಗ್ರಾಮದ ಲೋಕೋಪಯೋಗಿ ಇಲಾಖೆಗೆ ಸೇರಿದ ಸ.ನಂ.10 ರಲ್ಲಿ 3 ಎಕರೆ 10 ಗುಂಟೆ ಜಮೀನನ್ನು ಹುಬ್ಬಳ್ಳಿ–ಧಾರವಾಡ ಬಿ.ಆರ್.ಟಿ.ಎಸ್. ಕಂಪನಿ ಲಿಮಿಟೆಡ್‌ಗೆ ಹಸ್ತಾಂತರ ಮಾಡುವ ಕುರಿತು.

**ಓದಲಾಗಿದೆ:**

1. ಆಯುಕ್ತರು, ನಗರ ಭೂ ಸಾರಿಗೆ ಮತ್ತು ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ : DULT/383/ BRTS/2012-13/517, ದಿನಾಂಕ 15–11–2012.
2. ಸರ್ಕಾರದ ಆದೇಶ ಸಂಖ್ಯೆ : 383/ಡಿಯುಎಲ್‌ಟಿ/ಬಿಆರ್‌ಟಿಎಸ್/ಹೆಚ್.ಡಿ. ದಿನಾಂಕ 12–01–2012.
3. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಇವರ ಪತ್ರ ಸಂಖ್ಯೆ : ಸಿಬಿಎನ್/ಭೂಸ್ವಾಧೀನ/ವಿವ–10, 2012–13/04528, ದಿನಾಂಕ 2–09–2013.

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆಯುಕ್ತರು, ನಗರ ಭೂ ಸಾರಿಗೆ ಮತ್ತು ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಹುಬ್ಬಳ್ಳಿ–ಧಾರವಾಡ ಬಿ.ಆರ್.ಟಿ.ಎಸ್. ಕಂಪನಿಯು ಕಾರ್ಪೋರೇಟ್ ಕಚೇರಿ, ತರಬೇತಿ ಕೇಂದ್ರ ಹಾಗೂ ಟ್ರಾನ್ಸ್‌ಪೋರ್ಟನ ಗ್ಯಾಲರಿ ನಿರ್ಮಿಸುವ ಸಲುವಾಗಿ ಹುಬ್ಬಳ್ಳಿ ತಾಲ್ಲೂಕಿನ ಅಮರಗೋಳ ಗ್ರಾಮದ ಲೋಕೋಪಯೋಗಿ ಇಲಾಖೆಗೆ ಸೇರಿದ ಸರ್ವೆ ನಂ. 10 ರಲ್ಲಿ 12,756 ಚ.ಮೀ. (3 ಎಕರೆ 10 ಗುಂಟೆ) ಜಮೀನನ್ನು ಉಚಿತವಾಗಿ ಹುಬ್ಬಳ್ಳಿ–ಧಾರವಾಡದಲ್ಲಿ ಬಿ.ಆರ್.ಟಿ.ಎಸ್. ಕಂಪನಿ ಲಿಮಿಟೆಡ್‌ಗೆ ಹಸ್ತಾಂತರ ಮಾಡುವಂತೆ ಕೋರಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಿ.ಆರ್.ಟಿ.ಎಸ್. ಕಂಪನಿ ವತಿಯಿಂದ ಹುಬ್ಬಳ್ಳಿ–ಧಾರವಾಡದಲ್ಲಿ 22.25 ಕಿ.ಮೀ. ಉದ್ದ ಬಿ.ಆರ್.ಟಿ.ಎಸ್. ರಸ್ತೆ ಯೋಜನೆ ಅನುಷ್ಠಾನಗೊಳಿಸಲು ರೂ. 452.00 ಕೋಟಿ ಮೊತ್ತಕ್ಕೆ ಅನುಮೋದನೆ ನೀಡಲಾಗಿರುತ್ತದೆ. ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.

2. ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ, ಇವರು ಪ್ರಸ್ತಾಪಿತ ನಿವೇಶನವು ಹುಬ್ಬಳ್ಳಿ–ಧಾರವಾಡದ ರಸ್ತೆಯ ಮಧ್ಯಭಾಗದಲ್ಲಿದ್ದು, ಲೋಕೋಪಯೋಗಿ ಇಲಾಖೆಯ ಕಚೇರಿ ಕಟ್ಟಡಗಳಿಗೆ ಯೋಗ್ಯವಾಗಿರುತ್ತದೆ. ಆದರೆ ಸದರಿ ನಿವೇಶನದಲ್ಲಿ ಕಚೇರಿ ಕಟ್ಟಡಗಳನ್ನು ನಿರ್ಮಿಸಲು ಯಾವುದೇ ಪ್ರಸ್ತಾವನೆ ಸದ್ಯಕ್ಕೆ ಇರುವುದಿಲ್ಲ. ಬಿ.ಆರ್.ಟಿ.ಎಸ್. ಯೋಜನೆಯು ಒಂದು ಉತ್ತಮ ಯೋಜನೆಯಾಗಿದ್ದು, ಹುಬ್ಬಳ್ಳಿ–ಧಾರವಾಡದಲ್ಲಿ ಬಿ.ಆರ್.ಟಿ.ಎಸ್. ಯೋಜನೆ ಅಭಿವೃದ್ಧಿ ಪಡಿಸುವ ಸಲುವಾಗಿ ಒದಗಿಸಬಹುದಾಗಿರುತ್ತದೆಂದು ಅಭಿಪ್ರಾಯಿಸಿರುತ್ತಾರೆ.

3. ಬಿ.ಆರ್.ಟಿ.ಎಸ್. ಯೋಜನೆ ಅಭಿವೃದ್ಧಿಪಡಿಸುವ ಸಲುವಾಗಿ ಹುಬ್ಬಳ್ಳಿ ತಾಲ್ಲೂಕಿನ ಅಮರಗೋಳ ಗ್ರಾಮದ ಲೋಕೋಪಯೋಗಿ ಇಲಾಖೆಗೆ ಸೇರಿದ ಸರ್ವೆ ನಂ. 10 ರಲ್ಲಿ 3 ಎಕರೆ 10 ಗುಂಟೆ ನಿವೇಶನದ ಮಾರುಕಟ್ಟೆಯ ದರ ಹಿರಿಯ ಉಪನೋಂದಣಾಧಿಕಾರಿಗಳು, ಹುಬ್ಬಳ್ಳಿ ಇವರ ಪ್ರಕಾರ ಚದರ ಅಡಿಗೆ 785/– ಇದ್ದು. ಈ ನಿವೇಶನವು ಮೂಲೆ (ಕಾರ್ನರ್) ನಿವೇಶನವಾಗಿರುವುದರಿಂದ ಶೇಕಡ 10 ರಷ್ಟು ಹೆಚ್ಚುವರಿ ದರವನ್ನು ಸೂಚಿಸಿ ಅದರಂತೆ ಪ್ರತಿ ಚದರ ಅಡಿಗೆ ರೂ. 863/– ದರವನ್ನು ಆಕರಣೆ ಮಾಡಬೇಕಾಗಿರುವ ಹಿನ್ನೆಲೆಯಲ್ಲಿ ನಿವೇಶನದ ಒಟ್ಟು ಮೌಲ್ಯ ರೂ.11,85,19,313/– (ಹನ್ನೊಂದು ಕೋಟಿ ಎಂಬತ್ತೈದು ಲಕ್ಷ ಹತ್ತೊಂಬತ್ತು ಸಾವಿರದ ಮೂರು ನೂರಾ ಹದಿಮೂರು ರೂಪಾಯಿಗಳು ಮಾತ್ರ) ಆಗುತ್ತದೆಂದು ಮುಖ್ಯ ಇಂಜಿನಿಯರ್ ರವರು ವರದಿಸಿರುತ್ತಾರೆ.

4. ಸದರಿ ಜಮೀನಿನ ಚೆಕ್ಕುಬಂದಿ ಕೆಳಕಂಡಂತೆ ಇರುತ್ತದೆ.

**ಜಮೀನಿನ ವಿವರ ಹಾಗೂ ಚೆಕ್ಕುಬಂದಿ :**

ಸರ್ವೆ ನಂ. 10/ಬ್ಲಾಕ್–1

ವಿಸ್ತೀರ್ಣ : 3 ಎಕರೆ 10 ಗುಂಟೆ (12,756 ಚ.ಮೀ./1,37,254.56 ಚ.ಅ.)

ಪೂರ್ವ : ರಾಜ್ಯ ಹೆದ್ದಾರಿ–73

ಪಶ್ಚಿಮ : ಪಿಯು ಕಾಲೇಜು

ಉತ್ತರ : ಹೆಸ್ಕಾಂ ಕಟ್ಟಡ

ದಕ್ಷಿಣ : ಕುವೆಂಪು ರಸ್ತೆ

5. ಈ ಪ್ರಸ್ತಾವನೆ ಕುರಿತು ಕಂದಾಯ ಇಲಾಖೆ, ಆರ್ಥಿಕ ಇಲಾಖೆ ಅಭಿಪ್ರಾಯ ಪಡೆದು ಸಚಿವ ಸಂಪುಟದ ಅನುಮೋದನೆ ಪಡೆಯಲಾಗಿದೆ ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 534 ಬಿಎಂಎಸ್ 2012, ಬೆಂಗಳೂರು, ದಿನಾಂಕ: 18–07–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿತ ಜಮೀನಿನ ಮಾರ್ಗಸೂಚಿ ಬೆಲೆಯ ಶೇ.20 ರಷ್ಟನ್ನು ವಿಧಿಸಿ, ಹುಬ್ಬಳ್ಳಿ–ಧಾರವಾಡ ಬಿ.ಆರ್.ಟಿ.ಎಸ್. ಕಂಪನಿ ಲಿಮಿಟೆಡ್ ಇವರಿಗೆ ಕಾರ್ಪೋರೇಟ್ ಕಚೇರಿ, ತರಬೇತಿ ಕೇಂದ್ರ ಹಾಗೂ ಟ್ರಾನ್ಸ್‌ಪೋರ್ಟ ಗ್ಯಾಲರಿ ನಿರ್ಮಿಸುವ ಸಲುವಾಗಿ ಹುಬ್ಬಳ್ಳಿ ತಾಲ್ಲೂಕಿನ ಅಮರಗೋಳ ಗ್ರಾಮದ ಲೋಕೋಪಯೋಗಿ ಇಲಾಖೆಗೆ ಸೇರಿದ ಸರ್ವೆ ನಂ. 10 ರಲ್ಲಿ 3 ಎಕರೆ 10 ಗುಂಟೆ ಜಮೀನನ್ನು ಹಸ್ತಾಂತರ ಮಾಡಲು ಅನುಮತಿ ನೀಡಿ ಆದೇಶಿಸಲಾಗಿದೆ.

ಮುಖ್ಯ ಇಂಜಿನಿಯರ್, ಸಂ ಮತ್ತು ಕ (ಉ) ಧಾರವಾಡ ಇವರು ಜಮೀನು ಹಸ್ತಾಂತರಿಸಲು ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಂ. ವೀರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಕಟ್ಟಡಗಳು).

PR. 582

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ. ರುದ್ರಮುನಿ, ನಿವೃತ್ತ ಪಿಎಸ್‌ಐ, ದಾವಣಗೆರೆ ಇವರ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಕುರಿತು

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ರೈಲ್ವೇಸ್), ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ–6/2009–10 ದಿನಾಂಕ: 25.11.2009
2) ಸರ್ಕಾರದ ಆದೇಶ ಸಂಖ್ಯೆ :ಒಇ 97 ಪೊಸಿಅ 2010 ದಿನಾಂಕ: 19.07.2011
3) ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶ ಸಂಖ್ಯೆ: 7864/2011 ದಿನಾಂಕ: 26.08.2013 ಮತ್ತು ಪರಿಷ್ಕೃತ ಆದೇಶ ದಿನಾಂಕ:30.08.2013
4) ಸರ್ಕಾರದ ಆದೇಶ ಸಂಖ್ಯೆ: ಒಇ 15 ಪೊಸಿಅ 2014 ದಿನಾಂಕ: 07.04.2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿ ಶ್ರೀ.ಪಿ. ರುದ್ರಮುನಿ, ಇವರು ಅರಸೀಕೆರೆ ರೈಲ್ವೇ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ. ಕರ್ತವ್ಯದಲ್ಲಿ ತೀವ್ರತರವಾದ ದುರ್ನಡತೆ, ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಸದರಿಯವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಿ ಸದರಿಯವರ ಮೇಲಿನ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ದಂಡನೆಯನ್ನು ವಿಧಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಶ್ರೀ ಪಿ. ರುದ್ರಮುನಿ ಇವರು ಸರ್ಕಾರಕ್ಕೆ ಪುನರ್ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿ ತಮ್ಮ ದಂಡನಾ ಆದೇಶವನ್ನು ಕೈಬಿಡುವಂತೆ ಕೋರಿದ್ದು. ಸರ್ಕಾರವು ಸದರಿ ನೌಕರರ ಪುನರ್ ಪರಿಷ್ಕರಣ ಮನವಿಯನ್ನು ಪರಿಶೀಲಿಸಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ 1963ರ ನಿಯಮ 23(1)(ಬಿ)(ii)ರಡಿಯಲ್ಲಿ ಕಡ್ಡಾಯ ನಿವೃತ್ತಿಗೊಳಿಸಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ಡಂಡನೆಯನ್ನು ಸ್ಥಿರೀಕರಿಸಿ ಪರಿಷ್ಕರಣಾ ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಶ್ರೀ ಪಿ ರುದ್ರಮುನಿ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನಾ ಆದೇಶದ ವಿರುದ್ಧ ಅರ್ಜಿ ಸಂಖ್ಯೆ: 7864/2011ರಲ್ಲಿ ಪ್ರಕರಣವನ್ನು ದಾಖಲಿಸಿದ್ದರು. ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಸದರಿಯವರ ಪ್ರಕರಣವನ್ನು ವಿಚಾರಣೆಗೆ ಒಳಪಡಿಸಿ ದಿನಾಂಕ 26.08.2013ರಂದು ಈ ಕೆಳಕಂಡಂತೆ ತನ್ನ ತೀರ್ಪನ್ನು ನೀಡಿರುತ್ತದೆ.

We have heard the arguments of the learned counsel for the applicant and also the learned Additional Government Advocate. The applicant was working as Police Sub-Inspector (Railways). He was imposed other penalty of compulsory retirement under Rule 285 of K.C.S.Rs., by the 3rd Respondent who is the Deputy Inspector General of Police (Railways). According to Rule 285 of K.C.S.Rs., the authority competent to invoke punishment is only the Government and the 3rd Respondent is not competent to pass such an order. On this ground alone the impugened order is not sustainable in law and the same is liable to be set aside.

Accordingly, the applicant is allowed and the impugned order of compulsory retirement dated 25.11.2009 (Annexure-A26) issued by the 3rd Respondent is set aside. Liberty is reserved to the Respondents to take further action in the matter and pass appropriate orders in accordance with law. The applicant shall be re-instated in to service forthwith.

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶದ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರವು ಅರ್ಜಿದಾರರ ಆರೋಪಗಳನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) 1965ರನ್ವಯ ವಿಚಾರಣೆಗೆ ಆದೇಶಿಸಿದ್ದು, ಸದರಿ ನಿಯಮಗಳ ಅಡಿಯಲ್ಲಿ ದಂಡನಾದೇಶವನ್ನು ನೀಡದೇ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 285ರಡಿಯಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿರುವುದು ಕ್ರಮಬದ್ಧವಾಗಿಲ್ಲದೇ ಇರುವುದರಿಂದ ಮತ್ತು ಆರೋಪಿಸಿದ ಘಟನೆಯು ದಿನಾಂಕ: 23.08.2008ರಲ್ಲಿ ಜರುಗಿದ್ದು ಅರ್ಜಿದಾರರು ದಿನಾಂಕ 31.08.2013ರಂದು ನಿವೃತ್ತಿ ಹೊಂದಿದ್ದು ಸದರಿ ಪ್ರಕಣವು ಅರ್ಜಿದಾರರ ನಿವೃತ್ತಿ ದಿನಾಂಕದಿಂದ ನಾಲ್ಕು ವರ್ಷಗಳ ಹಿಂದಿನದಾಗಿದ್ದು ಇದನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 214ರ ಅನುಸಾರ ಈ ಹಂತದಲ್ಲಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸದೇ, ಅವಕಾಶವಿರುವುದಿಲ್ಲದ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ಶ್ರೀ ಪಿ. ರುದ್ರಮುನಿ, ಮಾಜಿ ಆರ್.ಪಿ.ಎಸ್.ಐ. ಇವರನ್ನು ಪ್ರಕರಣದಿಂದ ನಿರ್ದೋಷಿ ಎಂದು ಪರಿಗಣಿಸಿ ಆದೇಶಿಸಿದೆ.

ಸರ್ಕಾರವು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಆದೇಶವನ್ನು ಪರಿಶೀಲಿಸಿ ಸದರಿಯವರಿಗೆ ಬಾಕಿ ವೇತನವನ್ನು ಪಾವತಿ ಮಾಡಲು ಯಾವುದೇ ಆದೇಶವನ್ನು ಹೊರಡಿಸದೇ ಇದ್ದುದರಿಂದ ಸದರಿಯವರನ್ನು ಕಡ್ಡಾಯ ನಿವೃತ್ತಿಗೊಳಿಸಿದ ದಿನಾಂಕದಿಂದ ಅಂಶಿಕವಾಗಿ ಸೇವೆಗೆ ಪುನರ್‌ಸ್ಥಾಪಿಸಿ ಅವರು ಈ ಅವಧಿಯಲ್ಲಿ ಯಾವುದೇ ಕರ್ತವ್ಯ ನಿರ್ವಹಿಸದೇ ಇರುವುದರಿಂದ ಈ ಅವಧಿಯನ್ನು ಅಂದರೆ ದಿನಾಂಕ 25.11.2009ರಿಂದ ದಿನಾಂಕ: 31.08.2013ರವರೆಗಿನ ಅವಧಿಯನ್ನು "dies-non" ಎಂದು ಪರಿಗಣಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 15 ಪೊಸಿಅ 2014, ಬೆಂಗಳೂರು, ದಿನಾಂಕ:03.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಪಿ. ರುದ್ರಮುನಿ, ಮಾಜಿ ಆರ್.ಪಿ.ಎಸ್.ಐ ಇವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ದಿನಾಂಕ 25.11.2009ರಿಂದ ದಿನಾಂಕ: 31.08.2013ರವರೆಗಿನ ಅವಧಿಯಲ್ಲಿ ಯಾವುದೇ ಕರ್ತವ್ಯ ನಿರ್ವಹಿಸದೇ ಇರುವುದರಿಂದ ಈ ಅವಧಿಯನ್ನು "dies-non" ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ**

**PR. 614**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಎಸ್. ರಾಧ, ಮ.ಪಿ.ಎಸ್.ಐ., ಶಂಕರಪುರಂ ಪೊಲೀಸ್ ಠಾಣೆ ಮತ್ತು ಶ್ರೀಮತಿ ಡಿ. ಚಂದ್ರಮ್ಮ ಮ.ಹೆಚ್.ಸಿ–2306, ಸಿದ್ದಾಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರುಗಳ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 10/ಡಿಇ–1/ಆರ್–6/2010 ದಿನಾಂಕ: 04.06.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/36/2012–13 (ಓ.ಬಿ.ಸಂಖ್ಯೆ:––/2013–14) ದಿನಾಂಕ:06.05.2013
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07.09.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)48/2013–14 ದಿನಾಂಕ:20.12.2013.

**ಪ್ರಸ್ತಾವನೆ:–**

ಶ್ರೀಮತಿ ಎಸ್. ರಾಧ, ಮ.ಪಿ.ಎಸ್.ಐ., ಶಂಕರಪುರಂ ಪೊಲೀಸ್ ಠಾಣೆ ಮತ್ತು ಶ್ರೀಮತಿ ಡಿ. ಚಂದ್ರಮ್ಮ, ಮ.ಹೆಚ್.ಸಿ.–2306, ಸಿದ್ದಾಪುರ ಪೊಲೀಸ್ ಠಾಣೆ, ಬೆಂಗಳೂರು ನಗರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರುಗಳು ಈ ಹಿಂದೆ ಬಸವನಗುಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಅಧಿಕಾರ ದುರುಪಯೋಗ ಪ್ರದರ್ಶಿಸಿ ಅಕ್ರಮ ಸಂಭಾವನೆಯನ್ನು ಪಡೆದಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀಮತಿ ಎಸ್.ರಾಧಾ, ಮಹಿಳಾ ಪಿ.ಎಸ್.ಐ ಆದ ನೀವು ಬಸವನಗುಡಿ ಮಹಿಳಾ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಠಾಣೆಗೆ ಬರುವಂತಹ ದೂರುಗಳನ್ನು ಯಾವುದೇ ರೀತಿ ನಿರ್ಲಕ್ಷಿಸದೆ, ತಕ್ಷಣ ದಾಖಲು ಮಾಡಿಕೊಂಡು ಫಿರ್ಯಾದುದಾರರಿಗೆ ಸ್ವೀಕೃತಿ ನೀಡಬೇಕಾಗಿದ್ದರೂ ಸಹ ದಿನಾಂಕ: 06.03.2010 ರಂದು ಶ್ರೀಮತಿ ಶ್ವೇತಾ, ಶ್ರೀ ಮಹೇಶ್ ಹಾಗೂ ಶ್ರೀಮತಿ ಹೇಮಾವತಿ ಎಂಬುವರು ನಿಮ್ಮ ಠಾಣೆಗೆ ಹಾಜರಾಗಿ ಶ್ರೀಮತಿ ಶ್ವೇತಾರವರು ಅವರ ಪತಿ ಹಾಗೂ ಅವರ ಕುಟುಂಬದವರು ನೀಡುತ್ತಿದ್ದ ವರದಕ್ಷಿಣೆ ಕಿರುಕುಳದ ಬಗ್ಗೆ ಬರವಣಿಗೆಯಲ್ಲಿ ದೂರನ್ನು ನೀಡಿದ್ದು, ನೀವು ದೂರನ್ನು ತಕ್ಷಣ ದಾಖಲು ಮಾಡಿಕೊಳ್ಳದೇ, ದೂರು ದಾಖಲು ಮಾಡಲು ಮ.ಹೆಚ್.ಸಿ 2306 ರವರ ಮೂಲಕ ಫಿರ್ಯಾದಿಯವರಿಂದ ರೂ. 2000/– ಗಳ ಅಕ್ರಮ ಸಂಭಾವನೆಗೆ ಒತ್ತಾಯಿಸಿ, ದಿನಾಂಕ: 06.03.2010 ರಂದು ಪ್ರಕರಣ ದಾಖಲು ಮಾಡದೆ, ದಿನಾಂಕ: 07.03.2010 ರಂದು ರೂ. 2000/– ಗಳ ಅಕ್ರಮ ಸಂಭಾವನೆಯನ್ನು ಫಿರ್ಯಾದಿ ಹಾಗೂ ಫಿರ್ಯಾದಿಯ ತಮ್ಮ ಮಹೇಶ್ ರವರಿಂದ ಪಡೆದ ನಂತರ ಠಾಣೆಯ ಮೊ.ಸಂ. 43/2010 ಕಲಂ 498(ಎ) ಸಹಿತ 34 ಐ.ಪಿ.ಸಿ ಹಾಗೂ 3 ಮತ್ತು 4 ವರಕ್ಷಿಣೆ ಕಾಯ್ದೆಯಡಿ ಪ್ರಕರಣವನ್ನು ದಾಖಲು ಮಾಡಿಕೊಂಡು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಅಧಿಕಾರ ದುರುಪಯೋಗ ಹಾಗೂ ಅಕ್ರಮ ಸಂಭಾವನೆಯನ್ನು ಪಡೆದುಕೊಂಡಿರುತ್ತೀರಿ.

ಶ್ರೀಮತಿ ಎಸ್. ರಾಧಾ, ಮಹಿಳಾ ಪಿ.ಎಸ್.ಐ ಆದ ನೀವು ಬಸವಗುಡಿ ಮಹಿಳಾ ಪೊಲೀಸ್ ಠಾಣೆ ಮೊ.ಸಂ. 43/2010 ರಲ್ಲಿನ ಆರೋಪಿಗಳ ಪತ್ತೆ ಬಗ್ಗೆ ಸರ್ಕಾರ ಒದಗಿಸುವ ಸೌಲಭ್ಯದ ಮೇರೆಗೆ ಆರೋಪಿಗಳ ವಾಸ ಸ್ಥಾನಕ್ಕೆ ಹೋಗಬೇಕಾಗಿದ್ದರೂ ಸಹ ಫಿರ್ಯಾದಿ ಶ್ರೀಮತಿ ಶ್ವೇತಾ ಹಾಗೂ ಆಕೆಯ ತಮ್ಮನಾದ ಶ್ರೀ ಮಹೇಶ್‌ರವರಿಂದ ಆರೋಪಿಗಳ ವಾಸ ಸ್ಥಾನವಾದ ಮಧ್ಯಪ್ರದೇಶಕ್ಕೆ ತೆರಳಲು ವಿಮಾನ ಪ್ರಯಾಣದ ವೆಚ್ಚವನ್ನು ಭರಿಸುವಂತೆ ಒತ್ತಾಯಿಸಿ, ದಿನಾಂಕ; 23.03.2010 ರಂದು ಶ್ರೀ ಮಹೇಶ್ ರವರಿಂದ ರೂ. 3000/– ಗಳನ್ನು ಅಕ್ರಮ ಸಂಭಾವನೆಯಾಗಿ ಪಡೆಯುವಾಗ ಟಿ.ವಿ. 9 ಮಾಧ್ಯಮದವರು ಈ ಬಗ್ಗೆ ವಿಡಿಯೋ ಚಿತ್ರಿಕರಣ ಮಾಡಿಕೊಂಡು ದಿನಾಂಕ: 23.03.2010 ರಂದು ಸಾರ್ವಜನಿಕವಾಗಿ ಪ್ರಸಾರ ಮಾಡಿರುತ್ತಾರೆ. ಈ ರೀತಿ ನಿಮಗೆ ಪೊಲೀಸ್ ಇಲಾಖೆ ವತಿಯಿಂದ ಸಕಲ ಸೌಲಭ್ಯಗಳನ್ನು ಒದಗಿಸಿದ್ದರೂ ಸಹ ಫಿರ್ಯಾದಿಯವರ ಬಳಿ ಅಕ್ರಮ ಸಂಭಾವನೆ ಪಡೆದು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ತೋರಿಸಿರುತ್ತೀರಿ.

ಶ್ರೀಮತಿ ಚಂದ್ರಮ್ಮ, ಮಹಿಳಾ ಹೆಚ್.ಸಿ. 2306 ಆದ ನೀವು ಬಸವಗುಡಿ ಮಹಿಳಾ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 06.03.2010 ರಂದು ಶ್ರೀಮತಿ ಶ್ವೇತಾ, ಆಕೆಯ ತಮ್ಮನಾದ ಶ್ರೀ ಮಹೇಶ್ ಹಾಗೂ ಶ್ರೀಮತಿ ಹೇಮಾವತಿ ಎಂಬುವರು ಶ್ವೇತಾಳ ಪತಿ ಹಾಗೂ ಅವರ ಮನೆಯವರ ವಿರುದ್ಧ ವರದಕ್ಷಿಣೆ ಕಿರುಕುಳ ಪ್ರಕರಣವನ್ನು ದಾಖಲು ಮಾಡಲು ಬಂದಿದ್ದು, ನೀವು ಸದರಿಯವರ ದೂರಿಗೆ ಸ್ಪಂದಿಸದೆ, ದೂರು ದಾಖಲು ಮಾಡಿಸಲು ಮೇಲಾಧಿಕಾರಿಯವರ ಬಳಿ ಕಳುಹಿಸದೆ, ಸಂಜೆಯವರೆಗೆ ಕಾಯುವಂತೆ ಮಾಡಿ, ನಂತರ ಸುಮ್ಮನೆ ದೂರು ಕೊಟ್ಟಲ್ಲಿ ಕೆಲಸ ಆಗುವುದಿಲ್ಲ, ಮಹಿಳಾ ಪಿ.ಎಸ್.ಐ ರವರಿಗೆ ಅಕ್ರಮ ಸಂಭಾವನೆ ಕೊಟ್ಟು ದೂರನ್ನು ದಾಖಲಿಸಬೇಕೆಂದು ತಿಳಿಸಿ, ಪರೋಕ್ಷವಾಗಿ ಅಕ್ರಮ ಸಂಭಾವನೆಗೆ ಒತ್ತಾಯಿಸಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡಿರುತ್ತೀರಿ."

ಶ್ರೀಮತಿ ಚಂದ್ರಮ್ಮ ಮಹಿಳಾ ಹೆಚ್.ಸಿ., 2306 ಆದ ನೀವು ಬಸವಗುಡಿ ಮಹಿಳಾ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 23.03.2010 ರಂದು ಮೊ.ಸಂ. 43/2010 ಪ್ರಕರಣದ ಫಿರ್ಯಾದಿ ಶ್ರೀಮತಿ ಶ್ವೇತಾ ಅವರ ತಾಯಿ ಶ್ರೀಮತಿ ಹೇಮಾವತಿ ತಮ್ಮನಾದ ಶ್ರೀ ಮಹೇಶ್ ರವರು ಪ್ರಕರಣದ ಆರೋಪಿಗಳ ಪತ್ತೆಯ ಬಗ್ಗೆ ನಿಮ್ಮ ಹಾಗೂ ಮ.ಪಿ.ಎಸ್.ಐ ರವರ ಆದೇಶದ ಮೇರೆಗೆ ಠಾಣಾಗೆ ಬಂದಿದ್ದು, ಆರೋಪಿಗಳ ಪತ್ತೆ ಬಗ್ಗೆ ಮಧ್ಯಪ್ರದೇಶಕ್ಕೆ ವಿಮಾನದಲ್ಲಿ ಹೋಗಿ ಬರಲು ಭತ್ಯೆ ಭರಿಸುವಂತೆ ಮ.ಪಿ.ಎಸ್.ಐ ರವರು ಫಿರ್ಯಾದುದಾರರಲ್ಲಿ ಒತ್ತಾಯಿಸಿದ್ದು, ರೂ.500/– ಹಣವನ್ನು ಮಹೇಶ್ ರವರಿಂದ ಪಡಿಯುವಾಗ್ಗೆ ಟಿ.ವಿ. 9 ಮಾಧ್ಯಮದವರು ದೃಶ್ಯವನ್ನು ವಿಡಿಯೋ ಮೂಲಕ ಸೆರೆಹಿಡಿದು, ಅದೇ ದಿನ ಸಾರ್ವಜನಿಕವಾಗಿ ಟಿ.ವಿ. 9 ಚಾನಲ್‌ನಲ್ಲಿ ಪ್ರಸಾರ ಮಾಡಿರುತ್ತಾರೆ. ಈ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ, ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ"

ಜಂಟಿ ಇಲಾಖಾ ವಿಚಾರಣೆಯಲ್ಲಿ ಆ.ಪೋ.ಅ.ರವರ ವಿರುದ್ಧ ಆರೋಪವು ಸಾಬೀತಾದ ಕಾರಣ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 04.06.2012ರ ಆದೇಶದಲ್ಲಿ ಇವರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಎರಡು (2) ವರ್ಷಗಳ ಕಾಲ ಮುಂದೂಡಿ, ಇವರುಗಳು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06.05.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥ ಕಾರಣಗಳು ಇಲ್ಲದೇ ಇರುವುದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 126 ಪೊಸಿಅ 2013, ಬೆಂಗಳೂರು, ದಿನಾಂಕ:11.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಎಸ್.ರಾಧ, ಮ.ಪಿ.ಎಸ್.ಐ., ಶಂಕರಪುರಂ ಪೊಲೀಸ್ ಠಾಣೆ ಮತ್ತು ಶ್ರೀಮತಿ ಡಿ. ಚಂದ್ರಮ್ಮ ಮ.ಹೆಚ್.ಸಿ–2306, ಸಿದ್ದಾಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ**

PR. 615

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ:** ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸ್ಮಾರಕಗಳು ವಸ್ತು ಸಂಗ್ರಹಾಲಯಗಳು, ಮತ್ತು ಇತರೆ ಪರಂಪರೆ ಪ್ರದೇಶಗಳ ಬಗ್ಗೆ 3ಡಿ ಮ್ಯಾಪಿಂಗ್, ಗೂಗಲ್ ಪ್ಲಸ್ ಪೇಜನ್ನು ಮಾಡಿಕೊಡುವ ಬಗ್ಗೆ ಗೂಗಲ್ ಸಂಸ್ಥೆಯೊಡನೆ ಒಡಂಬಡಿಕೆ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಆಪ್ರಾಸಂಪ/ಎಸಿಟಿ.6/12/2014–15, ದಿ: 09.06.2014

**ಪ್ರಸ್ತಾವನೆ:**

ಕರ್ನಾಟಕದಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಉಳಿಸುವ ನಿಟ್ಟಿನಲ್ಲಿ ಮತ್ತು ಪ್ರಪಂಚದಲ್ಲೆಡೆ ಇದನ್ನು ಸುಲಭವಾಗಿ ಒದಗಿಸುವ ಸಂಬಂಧ ಗೂಗಲ್ ಸಂಸ್ಥೆಯವರು ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಸ್ತು ಸಂಗ್ರಹಾಲಯಗಳು, ಸ್ಮಾರಕಗಳು ಮತ್ತು ಇತರೆ ಪರಂಪರೆ ಪ್ರದೇಶ/ಸ್ಥಳ ಕುರಿತಂತೆ 3ಡಿ ಮ್ಯಾಪಿಂಗ್, ಗೂಗಲ್ ಪ್ಲಸ್ ಪೇಜನ್ನು ಉಚಿತವಾಗಿ ಮಾಡಿಕೊಡಲು ಮುಂದೆ ಬಂದಿರುತ್ತಾರೆ. ಇದರಿಂದ ನಮ್ಮ ಸಂಸ್ಕೃತಿಯ ಪರಂಪರೆಯು ಪ್ರಪಂಚದಾದ್ಯಂತ ವಿಸ್ತಾರವಾಗಿ ಹರಡುವುದಲ್ಲದೆ ಇತಿಹಾಸ ತಜ್ಞರಿಗೆ, ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ನವ ತಂತ್ರಜ್ಞಾನದ ಮೂಲಕ ಕಡಿಮೆ ಸಮಯದಲ್ಲಿ ಹೆಚ್ಚಿನ ಮಾಹಿತಿ ಲಭ್ಯವಾಗುತ್ತದೆ ಮತ್ತು ಹೆಚ್ಚಿನ ಅರಿವು ಮೂಡಿಸಲು ಸುಲಭವಾಗುತ್ತದಲ್ಲದೇ ಪ್ರವಾಸೋದ್ಯಮಕ್ಕೆ ಹೆಚ್ಚಿನ ಲಾಭವಾಗಲಿದೆ. ಇದರಿಂದಾಗಿ ಇಲಾಖೆಗೆ ವಿಶ್ವಮಟ್ಟದಲ್ಲಿ ಪ್ರಖ್ಯಾತಿ ಬರುವುದಲ್ಲದೆ ಈ ಬಗ್ಗೆ ಸಂಪೂರ್ಣ ಮಾಹಿತಿ, ದತ್ತಾಂಶಗಳ ಕ್ರೂಢೀಕರಣ ಸಾಧ್ಯವಾಗುತ್ತದೆ. ಈ ಕಾರ್ಯವನ್ನು ಗೂಗಲ್ ಸಂಸ್ತೆಯವರು ಯಾವುದೇ ಹಣಕಾಸಿನ ನೆರವಿಲ್ಲದೆ ಮಾಡಿಕೊಡುವುದರಿಂದ ಇದಕ್ಕೆ ಸರ್ಕಾರದ ಅನುಮತಿ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆರವರು ಕೋರಿರುತ್ತಾರೆ.

ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ ಮತ್ತು ಇತರೆ ರಾಜ್ಯಗಳು ಗೂಗಲ್ ಸಂಸ್ಥೆಯವರೊಂದಿಗೆ ಒಡಂಬಡಿಕೆ ಮಾಡಿಕೊಂಡಿದ್ದು, ಮೇಲ್ಕಂಡ ಕಾರಣಗಳಿಂದ ರಾಜ್ಯ ಸರ್ಕಾರವು ಸಹ ಗೂಗಲ್ ಸಂಸ್ಥೆಯೊಂದಗೆ ಒಡಂಬಡಿಕೆ ಮಾಡಿಕೊಳ್ಳುವುದು ಸೂಕ್ತವೆಂದು ತೀರ್ಮಾನಿಸಿ. ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾ 99 ಕೆಎಂಯು 2014, ಬೆಂಗಳೂರು, ದಿನಾಂಕ:03.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಾಚ್ಯವಸ್ತು, ಸಂಗ್ರಹಾಲಯಗಳ ಮತ್ತು ಪರಂಪರೆ ಇಲಾಖೆಯ ಆಯುಕ್ತರು ಮತ್ತು ಗೂಗಲ್ ಸಂಸ್ಥೆಯು ಪರಸ್ಪರ ಒಡಂಬಡಿಕೆ ಮಾಡಿಕೊಳ್ಳಲು ಸರ್ಕಾರವು ಈ ಕೆಳಕಂಡ ಷರತ್ತುಗಳ ಮೇರೆಗೆ ಮಂಜೂರಾತಿ ನೀಡಲಾಗಿದೆ:–

1. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರು ಅನುಮೋದಿಸಿದ ವಿಷಯಗಳು ಗೌಪ್ಯವಾಗಿ ಧಕ್ಕೆಯಾಗದಂತೆ ಮಾತ್ರ ಪ್ರದರ್ಶಿಸಲು ಅವಕಾಶವಿರುತ್ತದೆ.
2. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರಿಂದ ಲಿಖಿತ ಅನುಮೋದನೆ ಪಡೆದ ವಿಷಯಗಳನ್ನಷ್ಟೇ ಪ್ರದರ್ಶಿಸಬಹುದಾಗಿರುತ್ತದೆ.
3. ಈ ಕಾರ್ಯಕ್ಕೆ ತಗಲುವ ಸಮಯಾವಕಾಶವನ್ನು ಪರಸ್ಪರ ಸಮಾಲೋಚನೆ ಮೂಲಕ ನಿರ್ಧರಿಸಿ ಪಾಲಿಸಬೇಕಾಗಿರುತ್ತದೆ.
4. ಯಾವುದೇ ವಿವಾದಗಳ ಸಂದರ್ಭಗಳಲ್ಲಿ Arbitrator ರನ್ನು ನೇಮಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 617

SC. 50

**ಜಿ.ಬಿ.ಹೇಮಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರ ಇಲಾಖೆಯಾದ **"ವಾರ್ತಾ ಇಲಾಖೆ"** ಯ ಹೆಸರನ್ನು **"ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ"** ಎಂದು ಮರು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ವಾರ್ತಾ ಇಲಾಖೆ ಇವರ ಏಕ ಕಡತ ಸಂಖ್ಯೆ:ವಾಇ/ಇಎಸ್‌ಟಿ/ಇ8/8/2014–15

**ಪ್ರಸ್ತಾವನೆ:**

ದಿನಾಂಕ: 31–5–2014 ರ ಮಾನ್ಯ ಮೂಲ ಸೌಕರ್ಯ ಅಭಿವೃದ್ಧಿ, ವಾರ್ತಾ ಮತ್ತು ಹಜ್ ಸಚಿವರ ಪತ್ರದಲ್ಲಿ ವಾರ್ತಾ ಇಲಾಖೆಯನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಎಂದು ಮರುನಾಮಕರಣ ಮಾಡುವ ಕುರಿತಂತೆ ದೇಶದ ವಿವಿಧ ರಾಜ್ಯಗಳಲ್ಲಿ ವಾರ್ತಾ ಇಲಾಖೆಯನ್ನು

ನಾಮೀಕರಿಸಿರುವ ವಿವರಗಳು ಹಾಗೂ ಕಾರ್ಯಚಟುವಟಿಕೆಗಳ ಬಗ್ಗೆ ವಿಶ್ಲೇಷಣೆ ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಲು ಕೋರಿರುತ್ತಾರೆಂದು ತಿಳಿಸುತ್ತಾ, ಕೇರಳ. ಆಂಧ್ರಪ್ರದೇಶ, ಮೇಘಾಲಯ, ಪಂಜಾಬ್, ಚಂಡಿಗಡ, ಛತ್ತೀಸ್‌ಗಡ, ಬಿಹಾರ, ರಾಜಸ್ತಾನ, ಜಮ್ಮು ಮತ್ತು ಕಾಶ್ಮೀರ, ಅರುಣಾಚಲಪ್ರದೇಶ, ಉತ್ತರಾಖಂಡ್, ಒಡಿಸ್ಸಾ, ಹಿಮಾಚಲಪ್ರದೇಶ, ಜಾರ್ಖಂಡ್, ಮಧ್ಯಪ್ರದೇಶ, ಅಸ್ಸಾಂ, ಮಣಿಪುರ ಹಾಗೂ ಸಿಕ್ಕಿಂ ರಾಜ್ಯಗಳಲ್ಲಿ ವಾರ್ತಾ ಇಲಾಖೆಯನ್ನು **"ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ"** ಎಂಬ ಹೆಸರನಡಿ ಪತ್ರಿಕೆ/ಪತ್ರಕರ್ತರು, ಮಾಹಿತಿ/ಪ್ರಚಾರ ನೀಡುವ ಚಟುವಟಿಕೆಗಳನ್ನು ಕೈಗೊಂಡಿದೆ. ಇದರೊಂದಿಗೆ ಶಿಷ್ಟಾಚಾರ ಹಾಗೂ ಆತಿಥ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮೂಲಕವೇ ನಡೆಯುತ್ತಿದೆ ಎಂದು ತಿಳಿಸಿರುತ್ತಾರೆ.

2. ಮುಂದುವರಿದು, ಪತ್ರಿಕಾ ಚಟುವಟಿಕೆಗಳೊಂದಿಗೆ ಶಿಷ್ಟಾಚಾರ ಹಾಗೂ ಆತಿಥ್ಯಕ್ಕೆ ಸಂಬಂಧಿಸಿದ (Protocol Hospitality) ಕಾರ್ಯಭಾರವನ್ನು ವಾರ್ತಾ ಇಲಾಖೆಯ ಮೂಲಕ ಕೈಗೊಂಡರೆ, ಎಲ್ಲಾ ರಾಜ್ಯಗಳ ಮಾದರಿಯಲ್ಲೆ ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆಯು ಇನ್ನಷ್ಟು ಸಮರ್ಥವಾಗಿ ಹಾಗೂ ಯಶಸ್ವಿಯಾಗಿ ಕಾರ್ಯನಿರ್ವಹಿಸಬಹುದಾಗಿದೆ ಎಂದೂ, ಪ್ರಸ್ತುತ ವಾರ್ತಾ ಇಲಾಖೆ ಮಾಹಿತಿ ನೀಡುವ ಕಾರ್ಯ ಮಾತ್ರ ಮಾಡುತ್ತಿದೆ. ಇದು ಸೀಮಿತ ಪರಿಧಿಯ ಕಾರ್ಯ, ಸರ್ಕಾರದ ಬಗೆಗೆ ಇದರಿಂದ ಸಂಪೂರ್ಣ ಅರಿವು ಮೂಡಿಸಲು ಸಾಧ್ಯವಾಗುತ್ತಿಲ್ಲ. ಸಾರ್ವಜನಿಕ ಸಂಪರ್ಕವನ್ನು ಇಲಾಖೆಯ ವ್ಯಾಪ್ತಿಗೆ ತಂದಾಗ ಇಲಾಖೆ ಇನ್ನಷ್ಟು ಪರಿಣಾಮಕಾರಿಯಾಗಿ, ಸುಸಂಬದ್ಧವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆಂದು ತಿಳಿಸುತ್ತಾ ಇತರ ರಾಜ್ಯಗಳ ಮಾದರಿಯಲ್ಲಿ ಶಿಷ್ಟಾಚಾರ ಮತ್ತು ಆತಿಥ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ವಾರ್ತಾ ಇಲಾಖೆಗೆ ಹಸ್ತಾಂತರಿಸಬಹುದಾಗಿದೆ. ಹಾಗೂ ವಾರ್ತಾ ಇಲಾಖೆಯನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಎಂದು ಮರುನಾಮಕರಣ ಮಾಡಲು ಸರ್ಕಾರದ ಅನುಮೋದನೆ ನೀಡುವಂತೆ ಮೇಲೆ ಓದಲಾದ ಏಕ ಕಡತದಲ್ಲಿ ನಿರ್ದೇಶಕರು, ವಾರ್ತಾ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾ 38 ವಾಪ್ರಸಿ 2014 (ಭಾಗ) ಬೆಂಗಳೂರು, ದಿನಾಂಕ:08.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆಯ ವ್ಯಾಪ್ತಿಯಲ್ಲಿನ ಕ್ಷೇತ್ರೀಯ ಇಲಾಖೆಯಾದ ವಾರ್ತಾ ಇಲಾಖೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ **"ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ"** ಎಂದು ಮರು ನಾಮಕರಣ ಮಾಡಿ ಆದೇಶಿಸಿದೆ.

ಈ ಇಲಾಖೆಗೆ ವಹಿಸಲಾಗುವ ವಿಷಯ ಹಾಗೂ ಕೆಲಸಗಳ ಬಗ್ಗೆ ಪ್ರತ್ಯೇಕವಾಗಿ ಮಾರ್ಗಸೂಚಿಯನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಮಂಜುಳ**

**PR. 618**

ಸರ್ಕಾರದ ಅಧೀನ ಕಾರ್ಯದರ್ಶಿ(ವಾರ್ತೆ)
ಕನ್ನಡ, ಸಂಸ್ಕøತಿ ಹಾಗೂ ವಾರ್ತಾ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ** : ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರ ಅಳವಡಿಕೆಗಾಗಿ ಬಳ್ಳಾರಿ ಜಿಲ್ಲೆಯನ್ನು ಈಶಾನ್ಯ ಪೊಲೀಸ್ ವಲಯದ ವ್ಯಾಪ್ತಿಗೆ ಹಾಗೂ ಪ್ರಸ್ತುತ ಉತ್ತರ ವಲಯದ ವ್ಯಾಪ್ತಿಯಲ್ಲಿರುವ ಹಾವೇರಿ ಜಿಲ್ಲೆಯನ್ನು ಪೂರ್ವ ವಲಯದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**
1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಆರ್.ಎಲ್.ಎನ್. (4)4/2014–15, ದಿನಾಂಕ : 24–04–2014.
2. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಆರ್.ಎಲ್.ಎನ್.(4)4/2014–15, ದಿನಾಂಕ : 06–05–2014.

**ಪ್ರಸ್ತಾವನೆ :**

ಭಾರತ ಸಂವಿಧಾನದ ಅನುಚ್ಛೇದ 371(ಜೆ)ರಂತೆ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013 ರನ್ವಯ ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ರಾಜ್ಯ ಸರ್ಕಾರ ಅಥವಾ ಸಂಸ್ಥೆ/ಸಂಘಟನೆಗಳಿಗೆ ಸಂಬಂಧಪಟ್ಟ ವೃಂದಗಳಲ್ಲಿ ಸಮೂಹ 'ಸಿ' ಹುದ್ದೆಗಳಲ್ಲಿ ಶೇ 80% ಹಾಗೂ ಸಮೂಹ 'ಡಿ' ಹುದ್ದೆಗಳಲ್ಲಿ ಶೇ 85%ಕ್ಕೆ ಸಮನಾಗುವಂತೆ ಆ ಪ್ರದೇಶದಲ್ಲಿನ ಹುದ್ದೆಗಳ ಒಟ್ಟು ಸಂಖ್ಯೆಯಿಂದ "ಪ್ರಾದೇಶಿಕ ಸ್ಥಳೀಯ ವೃಂದ" ರಚಿಸಿ ಅಧಿಸೂಚನೆ ಹೊರಡಿಸಬೇಕಾಗಿರುತ್ತದೆ. ಪ್ರಸ್ತುತ ರಾಜ್ಯದಲ್ಲಿ 6 ಪೊಲೀಸ್ ವಲಯಗಳಿದ್ದು ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು ಈಶಾನ್ಯ ವಲಯದಲ್ಲಿರುತ್ತವೆ ಹಾಗೂ ಪೂರ್ವ ವಲಯದ ವ್ಯಾಪ್ತಿಗೆ ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳು ಒಳಪಡುತ್ತವೆ. ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ರಿಸರ್ವ್ ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಪ್ರ.ದ.ಸ. ಮತ್ತು ಶೀಘ್ರಲಿಪಿಗಾರರ ಹುದ್ದೆಗಳಿಗೆ ಆಯಾ ವಲಯದ ಪೊಲೀಸ್ ಮಹಾ ನಿರೀಕ್ಷಕರು ನೇಮಕಾತಿ ಪ್ರಾಧಿಕಾರವಾಗಿದ್ದು, ಈ ಹುದ್ದೆಗಳಿಗೆ ನೇರ ನೇಮಕಾತಿ ಮತ್ತು ಮುಂಬಡ್ತಿ ವಲಯದ ಮಟ್ಟದಲ್ಲಿಯೇ ನಡೆಸಲಾಗಿತ್ತಿದೆ.

ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚುರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಪ್ರಾದೇಶಿಕ ಸ್ಥಳೀಯ ವೃಂದ ರಚಿಸಬೇಕಿದ್ದು, ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿ ಉಳಿದ 5 ಜಿಲ್ಲೆಗಳು ಈಶಾನ್ಯ ಪೊಲೀಸ್ ವ್ಯಾಪ್ತಿಗೆ ಒಳಪಡುತ್ತಿದ್ದು, ಪೂರ್ವ ವಲಯದ ಬಳ್ಳಾರಿ ಜಿಲ್ಲೆಯಲ್ಲಿ ಉದ್ಭವಿಸುವ ರಿಕ್ತ ಸ್ಥಾನಗಳನ್ನು ಪ್ರತ್ಯೇಕವಾಗಿ ಗಣನೆಗೆ ತೆಗೆದುಕೊಂಡು ಪ್ರಾದೇಶಿಕ ಸ್ಥಳೀಯ ವೃಂದವನ್ನು ರಚಿಸಿದಲ್ಲಿ ಈ ಹುದ್ದೆಗಳು ವಲಯ ಮಟ್ಟದ ಬದಲಾಗಿ ಬಳ್ಳಾರಿ ಜಿಲ್ಲಾ ಮಟ್ಟದ ಹುದ್ದೆಗಳಾಗುತ್ತವೆ. ಆದ ಕಾರಣ ಬಳ್ಳಾರಿ ಜಿಲ್ಲೆಗೆ ಯಾವ ರೀತಿ ಘಟಕದ ಸ್ಥಳೀಯ ವೃಂದ ರಚಿಸಿ ವ್ಯಕ್ತಿಗಳ ಹಂಚಿಕೆ ಮಾಡಿ, ರೋಸ್ಟರ್ ಅಳವಡಿಸಿ ಅಧಿಸೂಚನೆ ಹೊರಡಿಸಬೇಕು ಹಾಗೂ ಇದಲ್ಲದೇ ಪೂರ್ವ ವಲಯದ ಇತರೆ ಜಿಲ್ಲೆಗಳಿಗೆ ಯಾವ ರೀತಿ ಘಟಕದ ಸ್ಥಳೀಯ ವೃಂದ ರಚಿಸಿ ವ್ಯಕ್ತಿಗಳ ಹಂಚಿಕೆ ಮಾಡಿ, ರೋಸ್ಟರ್ ಬಿಂದು ಅಳವಡಿಸಬೇಕು ಎಂಬ ಬಗ್ಗೆ ಗೊಂದಲವಾಗಿರುತ್ತದೆ. ಹೈದರಾಬಾದ್–ಕರ್ನಾಟಕ ಪ್ರದೇಶಗಳಾದ ಮೇಲ್ಕಂಡ 6 ಜಿಲ್ಲೆಗಳಲ್ಲಿ 5 ಜಿಲ್ಲೆಗಳು ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾಕ್ಕೆ ಒಳಪಡುತ್ತಿದ್ದು, ಪೂರ್ವ ವಲಯ, ದಾವಣಗೆರೆಗೆ ಸೇರಿದ ಬಳ್ಳಾರಿ ಜಿಲ್ಲೆಯನ್ನು ಈಶಾನ್ಯ ವಿಭಾಗಕ್ಕೆ ಒಳಪಡಿಸಿದ್ದಲ್ಲಿ ಪ್ರಾದೇಶಿಕ ಸ್ಥಳೀಯ ವೃಂದವನ್ನು

ಸುಗಮವಾಗಿ ರಚಿಸಲು ಅನುಕೂಲವಾಗುವುದರಿಂದ ಆಡಳಿತಾತ್ಮಕ ಹಿತದೃಷ್ಟಿಯಿಂದ ಬಳ್ಳಾರಿ ಜಿಲ್ಲೆಯನ್ನು ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾಕ್ಕೆ ಸೇರಿಸಿ ಅಧಿಸೂಚನೆ ಹೊರಡಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿದ್ದರು.

ಮುಂದುವರೆದು ಬಳ್ಳಾರಿ ಜಿಲ್ಲೆಯನ್ನು ಈಶಾನ್ಯ ವಲಯದ ವ್ಯಾಪ್ತಿಗೆ ಒಳಪಡಿಸಿದಲ್ಲಿ, ಪೂರ್ವ ವಲಯ, ದಾವಣಗೆರೆ ವ್ಯಾಪ್ತಿಯಲ್ಲಿ ಕೇವಲ 3 ಜಿಲ್ಲೆಗಳು ಉಳಿಯಲಿದ್ದು, ವಲಯದ ವ್ಯಾಪ್ತಿಯು ಗಣನೀಯವಾಗಿ ಕುಗ್ಗಲಿದೆ ಪ್ರಸ್ತುತ ಉತ್ತರ ವಲಯ, ಬೆಳಗಾವಿ ವ್ಯಾಪ್ತಿಯಲ್ಲಿ ಒಟ್ಟು 6 ಜಿಲ್ಲೆಗಳಿದ್ದು, ಹಾವೇರಿ ಜಿಲ್ಲೆಯು ವಲಯದ ಕೇಂದ್ರವಾದ ಬೆಳಗಾವಿಯಿಂದ 180 ಕಿ.ಮೀ. ದೂರದಲ್ಲಿದೆ ಹಾಗೂ ಪೂರ್ವ ವಲಯದ ಕೇಂದ್ರವಾ ದಾವಣಗೆರೆಯಿಂದ 75 ಕಿ.ಮೀ. ಅಂತರದಲ್ಲಿದೆ ಹಾವೇರಿ ಜಿಲ್ಲೆಯು ಪ್ರಸ್ತುತ ವಲಯ ಕೇಂದ್ರವಾದ ಬೆಳಗಾವಿಗಿಂತಲೂ ಪೂರ್ವ ವಲಯದ ಕೇಂದ್ರವಾದ ದಾವಣಗೆರೆ ಹತ್ತಿರವಿರುವ ಕಾರಣ, ಪೂರ್ವ ವಲಯದ ವ್ಯಾಪ್ತಿಗೆ ಕೇವಲ 3 ಜಿಲ್ಲೆಗಳು ಉಳಿಯುವುದರಿಂದ ವಲಯ ಪೊಲೀಸ್ ಮಹಾ ನಿರೀಕ್ಷಕರ ಕಾರ್ಯದೊತ್ತಡ ಕಡಿಮೆ ಇರುವ ಕಾರಣ, ಜಿಲ್ಲೆಯ ಸೂಕ್ತ ಮೇಲ್ವಿಚಾರಣೆ ನಡೆಸಬಹುದಾಗಿದೆ. ಆದಕಾರಣ ಆಡಳಿತಾತ್ಮಕ ಹಿತದೃಷ್ಟಿಯಿಂದ ಬಳ್ಳಾರಿ ಜಿಲ್ಲೆಯನ್ನು ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾಕ್ಕೆ ಸೇರಿಸಿ ಹಾಗೂ ಪ್ರಸ್ತುತ ಉತ್ತರ ವಲಯ, ಬೆಳಗಾವಿ ವ್ಯಾಪ್ತಿಯಲ್ಲಿರುವ ಹಾವೇರಿ ಜಿಲ್ಲೆಯನ್ನು ಪೂರ್ವ ವಲಯದ ವ್ಯಾಪ್ತಿಗೆ ಒಳಪಡಿಸುವ ಕುರಿತು ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತುವನೆಯನ್ನು ಪರಿಶೀಲಿಸಲಾಯಿತು ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಒಇ 94 ಪೊಸಇ 2014, ಬೆಂಗಳೂರು, ದಿನಾಂಕ : 29-05-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

1. ಪೂರ್ವ ವಲಯ, ದಾವಣಗೆರೆ ವ್ಯಾಪ್ತಿಯಿಂದ ಬಳ್ಳಾರಿ ಜಿಲ್ಲೆಯನ್ನು ಬೇರ್ಪಡಿಸಿ ಈಶಾನ್ಯ ವಲಯ, ಗುಲ್ಬರ್ಗಾ ವ್ಯಾಪ್ತಿಗೆ ಒಳಪಡಿಸಲಾಗಿದೆ.
2. ಉತ್ತರ ವಲಯ, ಬೆಳಗಾವಿ ವ್ಯಾಪ್ತಿಯಿಂದ ಹಾವೇರಿ ಜಿಲ್ಲೆಯನ್ನು ಬೇರ್ಪಡಿಸಿ ಪೂರ್ವ ವಲಯ, ದಾವಣಗೆರೆ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 463

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ)

## ಒಳಾಡಳಿತ ಸಚಿವಾಲಯ

**ವಿಷಯ :** ಸೋಮನಹಳ್ಳಿಗೆ ಮಂಜೂರಾಗಿರುವ ಪೊಲೀಸ್ ಠಾಣೆಯನ್ನು ಕಗ್ಗಲೀಪುರದಲ್ಲಿ ತೆರೆಯುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 207 ಪಿಓಪಿ 2008, ದಿನಾಂಕ : 10-02-2010.
2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ : ಆರ್.ಎಲ್.ಎನ್. (6) 44/2007-08, ದಿನಾಂಕ : 15-06-2010, 17-01-2011, 27-09-2013 ಮತ್ತು 23-04-2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ತಲಘಟ್ಟಪುರ ಪೊಲೀಸ್ ಠಾಣೆಯ ಹಾಲಿ ಸಿಬ್ಬಂದಿ ಬಲದಲ್ಲಿಯೇ ಸೋಮನಹಳ್ಳಿಯಲ್ಲಿ ಪೊಲೀಸ್ ಠಾಣೆಯನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸೋಮನಹಳ್ಳಿಯಲ್ಲಿ ಹೊಸಠಾಣೆ ತೆರೆಯಲು ಬೇಕಾಗಿರುವ ತಾತ್ಕಾಲಿಕ ಕಟ್ಟಡ, ಸಿಬ್ಬಂದಿ ವಾಸಿಸಲು ಬೇಕಾಗಿರುವ ವಸತಿ ವ್ಯವಸ್ಥೆ ಮತ್ತು ಕವಾಯತು ಮೈದಾನ ಹಾಗೂ ಪ್ರಸ್ತುತ ನೈಸ್ ಕಂಪನಿಗೆ ಭೂಸ್ವಾಧೀನವಾಗಿರುವ 4 ಸಾವಿರ ಎಕರೆ ಭೂವಿವಾದದ ಸಮಸ್ಯೆಯನ್ನು ಗಮನದಲ್ಲಿಟ್ಟುಕೊಂಡು ಸ್ಥಳ ಪರಿಶೀಲನೆ ನಡೆಸಿ, ಸೋಮನಹಳ್ಳಿ ಕೇಂದ್ರದಲ್ಲಿ ಠಾಣೆ ತೆರೆದಲ್ಲಿ ಆಡಳಿತ ದೃಷ್ಟಿಯಿಂದ ಅನುಕೂಲತೆಗಳು ಇಲ್ಲದ್ದರಿಂದ ಪರ್ಯಾಯ ವ್ಯವಸ್ಥೆಗಾಗಿ ಕಗ್ಗಲೀಪುರ ಕೇಂದ್ರದಲ್ಲಿ ಠಾಣೆ ತೆರೆಯಬೇಕಾಗಿರುತ್ತದೆ. ಸೋಮನಹಳ್ಳಿ ಕೇಂದ್ರದಲ್ಲಿ ಠಾಣೆ ತೆರೆದಲ್ಲಿ ಠಾಣೆಗೆ ಬೇಕಾದ ಸೂಕ್ತ ಕಟ್ಟಡ, ನಿವೇಶನ, ಪೆರೇಡ್ ಮೈದಾನಗಳು ಇರುವುದಿಲ್ಲ. ಸದರಿ ಠಾಣಾ ಕೇಂದ್ರ ಸ್ಥಳವು ಹಾರೋಹಳ್ಳಿ ಪೊಲೀಸ್ ಠಾಣೆಗೆ ಅತೀ ಸಮೀಪವಾಗಿದ್ದು, ಪೊಲೀಸ್ ಠಾಣೆಯಲ್ಲಿನ ವ್ಯಾಪ್ತಿಯ ಹಳ್ಳಿಗಳೂ ಕೇಂದ್ರ ಸ್ಥಾನದಿಂದ ದೂರವಾಗುವುದರಿಂದ ಸಕಾಲದಲ್ಲಿ ಸಮಸ್ಯಗಳನ್ನು ಬಗೆಹರಿಸಲು ಕಷ್ಟವಾಗುತ್ತದೆಂದು ವಿವರಿಸಿರುತ್ತಾರೆ.

ಮುಂದುವರೆದು, ಕಗ್ಗಲೀಪುರ ಕೇಂದ್ರದಲ್ಲಿ ಠಾಣೆ ತೆರೆದಲ್ಲಿ ಒಟ್ಟು ಠಾಣಾ ಕ್ಷೇತ್ರದ 18 ಕಿ.ಮೀ. ಉದ್ದದ ವ್ಯಾಪ್ತಿಯ ಮಧ್ಯ ಭಾಗವಾದ ಅಂದಾಜು 10 ಕಿ.ಮೀ. ಕೇಂದ್ರ ಬಿಂದುವಿನಲ್ಲಿ ಸ್ಥಾಪಿದಂತಾಗುತ್ತದೆ. ಕಗ್ಗಲೀಪುರ ಕೇಂದ್ರ ಸ್ಥಾನದಲ್ಲಿ ಹೊಸಠಾಣೆಯನ್ನು ತೆರೆದಲ್ಲಿ ಕಗ್ಗಲೀಪುರ ಗ್ರಾಮ ಪಂಚಾಯಿತಿಯಿಂದ 2 ಎಕರೆ ಸರ್ಕಾರಿ ನಿವೇಶನ ಅಥವಾ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸಾರ್ವಜನಿಕ ಆಸ್ಪತ್ರೆಯ ಕಟ್ಟಡವು ಸೇರಿದಂತೆ ಖಾಲಿ ನಿವೇಶನವನ್ನು ಕೊಡಲು ಒಪ್ಪಿರುತ್ತಾರೆ. ಹಾಗೂ ಸಾರ್ವಜನಿಕ ಆಸ್ಪತ್ರೆ, ಬಸ್ ಸೌಕರ್ಯ ಸೌಲಭ್ಯವಿರುತ್ತದೆ. ಪ್ರಸ್ತುತ ಸರ್ಕಾರದಲ್ಲಿ ಮಂಜೂರಾಗಿರುವ ಸೋಮನಹಳ್ಳಿ ಠಾಣೆಯನ್ನು ಸ್ಥಳಾಂತರಿಸಿ ಕಗ್ಗಲೀಪುರ ಕೇಂದ್ರಸ್ಥಾನದಲ್ಲಿ ತೆರೆಯಲು ಮಂಜೂರಾತಿ ಆದೇಶವನ್ನು ನೀಡುವಂತೆ ಡಿಜಿ ಮತ್ತು ಐ.ಜಿ.ಪಿ ರವರು ಸರ್ಕಾರವನ್ನು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕ ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 28 ಪಿಒಪಿ 2011(ಭಾ–2), ಬೆಂಗಳೂರು, ದಿನಾಂಕ : 28–05–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆದೇಶ ಸಂಖ್ಯೆ : ಹೆಚ್‌ಡಿ 207 ಪಿಓಪಿ 2008, ದಿನಾಂಕ : 10–02–2010 ರಲ್ಲಿ ಸೋಮನಹಳ್ಳಿಗೆ ಮಂಜೂರಾಗಿರುವ ಪೊಲೀಸ್ ಠಾಣೆಯನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ಸೋಮನಹಳ್ಳಿಗೆ ಬದಲಾಗಿ ತಲಘಟ್ಟಪುರ ಪೊಲೀಸ್ ಠಾಣೆಯ ಹಾಲಿ ಸಿಬ್ಬಂದಿ ಬಲದಲ್ಲಿಯೇ ಕಗ್ಗಲೀಪುರದಲ್ಲಿ ಪೊಲೀಸ್ ಠಾಣೆಯನ್ನು ತೆರೆಯಲು ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 464
SC 50

**ಹೆಚ್.ಆರ್. ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ ( ಪೊಲೀಸ್ ವೆಚ್ಚ ).

**ಒಳಾಡಳಿತ ಸಚಿವಾಲಯ**

**ವಿಷಯ :** ಬೆಳಗಾಂ ಪೊಲೀಸ್ ಕಮೀಷನರೇಟ್‌ಗೆ ವಿವಿಧ ದರ್ಜೆಯ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 92 ಪಿಓಪಿ 2013, ದಿನಾಂಕ : 22–11–2013.
2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ : ಆರ್.ಎಲ್.ಎನ್. (4) 47(ಎ)/2000–01, ದಿನಾಂಕ : 5–9–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಬೆಳಗಾಂ ನಗರದಲ್ಲಿ ಪೊಲೀಸ್ ಕಮೀಷನರೇಟ್ ಅನ್ನು ಉಪ ಪೊಲೀಸ್ ಮಹಾ ನಿರೀಕ್ಷಕರು (ಪಿ.ಪಿ.ಎಸ್) ವೃಂದರವರ ನೇತೃತ್ವದಲ್ಲಿ ಸ್ಥಾಪಿಸಲು ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬೆಳಗಾಂ ಜಿಲ್ಲೆಯು ಎರಡನೇ ಅವಿಭಜಿತ ಜಿಲ್ಲೆಯಾಗಿದ್ದು, ಪ್ರಸ್ತುತ 6 ಪೊಲೀಸ್ ಉಪ ವಿಭಾಗಗಳು, 15 ಪೊಲೀಸ್ ವೃತ್ತ ಕಛೇರಿಗಳು, 45 ಪೊಲೀಸ್ ಠಾಣೆಗಳು ಹಾಗೂ 18 ಹೊರಠಾಣೆಗಳು ಅಲ್ಲದೇ ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಜಿಲ್ಲಾ ಅಪರಾಧ ದಾಖಲೆ ವಿಭಾಗ, ನಿಸ್ತಂತು, ಎಫ್.ಪಿ.ಬಿ. ಘಟಕಗಳು ಬೆಳಗಾಂನ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಯ ವ್ಯಾಪ್ತಿಯಲ್ಲಿ ಇರುತ್ತವೆ. ಬೆಳಗಾಂ ನಗರವು ಒಟ್ಟು 595.36 ಚದರ ಕಿ.ಮೀ. ಪ್ರದೇಶದಲ್ಲಿ ಮಾರ್ಕೆಟ್ ಉಪ ವಿಭಾಗದ 5 ಪೊಲೀಸ್ ಠಾಣೆಗಳು, ಖಡೇಬಜಾರ್ ಉಪ ವಿಭಾಗದ 6 ಪೊಲೀಸ್ ಠಾಣೆಗಳು ಮತ್ತು ಬೆಳಗಾಂ ಗ್ರಾಮೀಣ ಉಪ ವಿಭಾಗದ 4 ಪೊಲೀಸ್ ಠಾಣೆಗಳ ವ್ಯಾಪ್ತಿಯನ್ನು ಹೊಂದಿರುತ್ತದೆ. ಪ್ರಸ್ತುತ ಬೆಳಗಾಂ ನಗರದಲ್ಲಿ 15 ಪೊಲೀಸ್ ಠಾಣೆಗಳಿರುತ್ತವೆ. 2011ರ ಜನಗಣತಿಯಂತೆ ಬೆಳಗಾಂ ನಗರದ ಜನಸಂಖ್ಯೆಯು 16 ಲಕ್ಷಗಳನ್ನು ಮೀರಿರುತ್ತದೆ ಮತ್ತು ದಿನನಿತ್ಯ ಬೆಳಗಾಂ ನಗರಕ್ಕೆ ಸುಮಾರು 2 ಲಕ್ಷ ಜನ ಬಂದು ಹೋಗುವವರಿರುತ್ತಾರೆ. ರಾಷ್ಟ್ರೀಯ ಪೊಲೀಸ್ ಆಯೋಗದ ಶಿಫಾರಸ್ಸಿನಂತೆ 10 ಲಕ್ಷಕ್ಕು ಹೆಚ್ಚು ಜನಸಂಖ್ಯೆ ಇರುವ ನಗರಕ್ಕೆ ಪೊಲೀಸ್ ಕಮೀಷನರೇಟ್ ಸ್ಥಾಪಿಸಬಹುದಾಗಿರುತ್ತದೆ.

ಅಲ್ಲದೇ, ಬೆಳಗಾಂ ನಗರವು ಮಹಾರಾಷ್ಟ್ರ ರಾಜ್ಯದ ಗಡಿಗೆ ಹತ್ತಿರವಾಗಿರುವುದರಿಂದ ಭಾಷಾ ಹೋರಾಟಗಳ ಇತಿಹಾಸವನ್ನು ಹೊಂದಿರುತ್ತದೆ. ಈ ನಗರವು ವಿವಿಧ ಸಮಯಗಳಲ್ಲಿ ಮತೀಯ ಒತ್ತಡಗಳನ್ನು ಸಹ ಎದುರಿಸಿರುತ್ತದೆ. ಮಹಾರಾಷ್ಟ್ರ ಹಾಗೂ ಗೋವಾ ರಾಜ್ಯಗಳ ಸಮಾಜ ಘಾತುಕ ವ್ಯಕ್ತಿಗಳು/ಅಪರಾಧ ಪ್ರಕರಣಗಳಲ್ಲಿ ಭಾಗಿಯಾದವರುಗಳು ಬೆಳಗಾಂ ನಗರವನ್ನು ಗುಪ್ತತಾಣವಾಗಿ ಮಾಡಿಕೊಂಡು ತಮ್ಮ ಸಮಾಜ ಘಾತುಕ ಚಟುವಟಿಕೆಗಳನ್ನು ನಡೆಸಲು ಉಪಯೋಗಿಸುತ್ತಿದ್ದಾರೆ. ಇತ್ತೀಚೆಗೆ ಬೆಳಗಾಂ ನಗರದಲ್ಲಿ ಅಪರಾಧ ಪ್ರಕರಣಗಳು ಹೆಚ್ಚಾಗಿರುವುದಲ್ಲದೇ ಪದೇ ಪದೇ ಕಾನೂನು ಮತ್ತು ಸುವ್ಯವಸ್ಥೆಗೆ ಧಕ್ಕೆಯಾಗಿರುತ್ತದೆ. ಪೊಲೀಸ್ ಕಮೀಷನರೇಟ್‌ನ ಸ್ಥಾಪನೆಯಿಂದ ಬೆಳಗಾಂ ಪೊಲೀಸ್ ಆಯುಕ್ತರು ದಂಡ ಪ್ರಕ್ರಿಯಾ ಸಂಹಿತೆ ಹಾಗೂ ಕರ್ನಾಟಕ ಪೊಲೀಸ್ ಕಾಯ್ದೆಯಡಿಯಲ್ಲಿ ಅಧಿಕಾರವನ್ನು ಪಡೆಯಲಿದ್ದು, ಇದರಿಂದ ಜಿಲ್ಲಾಧಿಕಾರಿಗಳಿಗೆ ಒತ್ತಡವು ಕಡಿಮೆಯಾಗಿ ಅವರು ಜಿಲ್ಲೆಯ ಉತ್ತಮ ಆಡಳಿತದ ಬಗ್ಗೆ ಹೆಚ್ಚಿನ ಗಮನ ಹರಿಸಬಹುದಾಗಿರುತ್ತದೆ. ಆದ್ದರಿಂದ ಬೆಳಗಾಂ ನಗರದಲ್ಲಿ ಪೊಲೀಸ್ ಕಮೀಷನರೇಟ್‌ನ್ನು ವಿವಿಧ ವೃಂದದ ಒಟ್ಟು 1119 ಹುದ್ದೆಗಳೊಂದಿಗೆ ಸ್ಥಾಪಿಸಲು ಹಾಗೂ ಈ ಸಂಬಂಧ ತಗಲುವ ಆವರ್ತಕ ಹಾಗೂ ಅನಾವರ್ತಕ ವೆಚ್ಚ ರೂ. 29,70,42,984 ಮತ್ತು ರೂ. 13,28,45,000 ಗಳಿಗೆ ಮಂಜೂರಾಗಿ ಆದೇಶ ನೀಡುವಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಸರ್ಕಾರವನ್ನು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 92 ಪಿಓಪಿ 2013, ಬೆಂಗಳೂರು, ದಿನಾಂಕ : 26–05–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾಂ ಪೊಲೀಸ್ ಕಮೀಷನರೇಟ್‌ಗೆ ಈ ಆದೇಶದ ಅನುಬಂಧದಲ್ಲಿರುವಂತೆ ವಿವಿಧ ದರ್ಜೆಯ 514 ಹುದ್ದೆಗಳನ್ನು ಸೃಜಿಸಲು ಸರ್ಕಾರವು ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 451 ವೆಚ್ಚ–11 2014 ದಿನಾಂಕ : 22–03–2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 92 ಪಿಓಪಿ 2013, ಬೆಂಗಳೂರು, ದಿನಾಂಕ : 26-05-2014ರ ಅನುಬಂಧ**

| ಕ್ರ ಸಂ. | ಹುದ್ದೆಗಳು | ಹುದ್ದೆಗಳ ಸಂಖ್ಯೆ |
|---|---|---|
| | **Civil Officers/Staff** | |
| 1. | DIGP | 01 |
| 2. | DCP (Non IPS) | 02 |
| 3. | ACP | 02 |
| 4. | PI | 10 |
| 5. | PSI | 08 |
| 6. | ASI | 18 |
| 7. | HC | 73 |
| 8. | PC | 200 |
| | **Total** | **314** |
| | **Reserved Armed Police** | |
| 1. | DCP (Armed) | 01 |
| 2. | RPI | 03 |
| 3. | RSI | 08 |
| 4. | ARSI | 13 |
| 5. | AHC | 20 |
| 6. | APC | 100 |
| 7. | Follower (cook & water carrier | 05 |
| | **Total** | **150** |
| | **Wireless Staff** | |
| 1. | PI | 01 |
| 2. | PSI | 03 |
| 3. | ASI | 04 |
| 4. | HC | 08 |
| 5. | PC | 05 |
| | **Total** | **21** |
| | **Finger Print Bureau Staff** (ಬೆರಳು ಮುದ್ರೆ ಘಟಕ) | |
| 1. | PI | 01 |
| 2. | PSI | 01 |
| 3. | PC | 04 |
| | **Total** | **06** |
| | **Ministerial Staff** | |
| 1. | AAO | 01 |
| 2. | SS | 04 |
| 3. | FDA | 03 |
| 4. | Stenographer | 04 |
| 5. | SDA | 05 |
| 6. | Typist | 06 |
| | **Total** | **23** |
| | **Grand Total** | **514** |

**P.R. 465**
**SC-50**

**ಹೆಚ್.ಆರ್. ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ :** ಎಸ್.ಪಿ. (ಪಿಆರ್‌ಓ) ಅಧೀನದಲ್ಲಿನ ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ : ಆರ್.ಎಲ್.ಎನ್. (2)14/2013–14, ದಿನಾಂಕ : 29–11–2013.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 29–11–2013ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಪೊಲೀಸ್ ಪ್ರಧಾನ ಕಛೇರಿಯಲ್ಲಿನ ಪೊಲೀಸ್ ಅಧೀಕ್ಷಕರು ಮತ್ತು ಸಾರ್ವಜನಿಕ ಸಂಪರ್ಕಾಧಿಕಾರಿರವರಿಗೆ ಸಹಾಯಕ್ಕಾಗಿ ದೈನಂದಿನ ದಿನಪತ್ರಿಕೆ, ವಾರಪತ್ರಿಕೆ, ಮಾಸಿಕ ಪತ್ರಿಕೆ ಮತ್ತು ಟಿವಿ ಮಾಧ್ಯಮಗಳಲ್ಲಿ ಇಲಾಖೆಗೆ ಸಂಬಂಧಪಟ್ಟಂತೆ ಪ್ರಕಟವಾಗುವ ಮಾಹಿತಿಗಳನ್ನು ಹಿರಿಯ ಪೊಲೀಸ್ ಅಧಿಕಾರಿಗಳ ಗಮನಕ್ಕೆ ತರುವುದು, ಇಲಾಖೆಯಲ್ಲಿ ಉತ್ತಮ ಕಾರ್ಯಗಳನ್ನು ಮಾಡಿದಂತಹ ಸಂದರ್ಭಗಳಲ್ಲಿ ಅವುಗಳ ಬಗ್ಗೆ ಪತ್ರಿಕಾ ಪ್ರಕಟಣೆಗಳನ್ನು ತಯಾರಿಸಿ ಮಾಧ್ಯಮಗಳ ಮುಖಾಂತರ ಪ್ರಕಟಿಸುವುದು. ಇಲಾಖೆಯ ಹಿರಿಯ ಪೊಲೀಸ್ ಅಧಿಕಾರಿಗಳ ಪತ್ರಿಕಾಗೋಷ್ಠಿಯನ್ನು ಏರ್ಪಡಿಸಿ ಸೂಕ್ತ ಸಮಯದಲ್ಲಿ ಎಲ್ಲಾ ಮಾಧ್ಯಮದವರನ್ನು ಆಹ್ವಾನಿಸುವುದು, ಇಲಾಖೆಯಲ್ಲಿ ಆಗಿಂದಾಗ್ಗೆ ನಡೆಯುವ ಸಭೆ ಸಮಾರಂಭಗಳನ್ನು ಏರ್ಪಡಿಸಲು ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯನ್ನು ತುಂಬಲಾಗಿರುತ್ತದೆ. ಆದರೆ, ಈ ಹುದ್ದೆಗೆ ಯಾವುದೇ ರೀತಿಯ ಮುಂಬಡ್ತಿಯು ಅವಕಾಶಗಳು ಇರುವುದಿಲ್ಲ. ಪೊಲೀಸ್ ಪ್ರಧಾನ ಕಛೇರಿಗೆ ಪ್ರತಿ ನಿತ್ಯ ಆಗಮಿಸುವ ಸಾರ್ವಜನಿಕರೊಂದಿಗೆ, ಗಣ್ಯ ವ್ಯಕ್ತಿಗಳೊಂದಿಗೆ ಮತ್ತು ಇಲಾಖೆಯ ಹಿರಿಯ ಅಧಿಕಾರಿಗಳೊಂದಿಗೆ ಹಾಗೂ ಮಾಧ್ಯಮದವರೊಂದಿಗೆ ಉತ್ತಮ ಬಾಂಧವ್ಯವನ್ನು ಇಟ್ಟುಕೊಂಡು ಕಾರ್ಯನಿರ್ವಹಿಸುವಲ್ಲಿ ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯು ಬಹಳ ಪ್ರಮುಖವಾಗಿರುತ್ತದೆ. ಈ ಹುದ್ದೆಯು ಪೊಲೀಸ್ ಕೇಂದ್ರ ಸ್ಥಾನದಲ್ಲಿ ಬಹಳ ಕೆಳಮಟ್ಟದಲ್ಲಿದ್ದು, ಇಲಾಖೆಯ ಹಿತದೃಷ್ಟಿಯಿಂದ ಎ.ಪಿ.ಆರ್.ಓ. ಹುದ್ದೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ ಎಂದು ಪದನಾಮೀಕರಿಸಿ, ಮೇಲ್ದರ್ಜೆಗೇರಿಸುವುದು ಅತ್ಯಂತ ಸೂಕ್ತ ಮತ್ತು ಅವಶ್ಯಕವೆಂದು ಕಂಡು ಬಂದಿರುತ್ತದೆ. ಇತರೆ ಇಲಾಖೆ, ಐ.ಟಿ. ಸಂಸ್ಥೆ, ಭಾರತ ಸರ್ಕಾರದ ಇಲಾಖೆಗಳೊಂದಿಗೆ ಕೂಡ ಅನೇಕ ವಿಷಯಗಳ ಬಗ್ಗೆ ಸಮಾಲೋಚನೆ ಮಾಡಬೇಕಾದ ಸಂದರ್ಭಗಳಿದ್ದು, ಅದಕ್ಕಾಗಿ ಹಿರಿಯ ಪದನಾಮಾಂಕಿತದ ಪದನಾಮವುಳ್ಳ ಎ.ಪಿ.ಆರ್.ಓ. ಹುದ್ದೆ ಇರುವುದು ಅನಿವಾರ್ಯವಾಗಿರುತ್ತದೆ. ಈ ಹುದ್ದೆಯನ್ನು ಮೇಲ್ದರ್ಜೆಗೇರಿಸುವುದರಿಂದ ಇಲಾಖೆಗೆ ಮತ್ತು ಸರ್ಕಾರಕ್ಕೆ ಯಾವುದೇ ರೀತಿಯ ಆರ್ಥಿಕ ಹೊರೆಯಾಗುವುದಿಲ್ಲ. ಮೇಲೆ ವಿವರಿಸಿರುವ ಕಾರಣಗಳಿಂದ ಹಾಗೂ ಇಲಾಖೆಯ ಆಡಳಿತಾತ್ಮಕ ಹಿತದೃಷ್ಟಿಯಿಂದ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ದರ್ಜೆಯ ಈ ಎ.ಪಿ.ಆರ್.ಓ. ಹುದ್ದೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ ಎಂದು ಪದನಾಮೀಕರಿಸಿ ಮೇಲ್ದರ್ಜೆಗೇರಿಸಿ ಆದೇಶವನ್ನು ಹೊರಡಿಸುವಂತೆ ಡಿಜಿ ಮತ್ತು ಐ.ಜಿ.ಪಿ. ರವರು ಸರ್ಕಾರವನ್ನು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 225 ಪಿಒಪಿ 2013, ಬೆಂಗಳೂರು, ದಿನಾಂಕ : 28–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಡಳಿತಾತ್ಮಕ ಹಿತದೃಷ್ಟಿಯಿಂದ ಎಸ್.ಪಿ. (ಪಿಆರ್‌ಓ) ಅಧೀನದಲ್ಲಿನ ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ (ವೇತನ ಶ್ರೇಣಿ ರೂ. 20,000–36,300) ಹುದ್ದೆಯನ್ನು ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ (ವೇತನ ಶ್ರೇಣಿ ರೂ. 21,600–40,500) ಹುದ್ದೆ ಎಂದು ಪದನಾಮೀಕರಿಸಿ ಮೇಲ್ದರ್ಜೆಗೇರಿಸಿ ಆದೇಶ ಹೊರಡಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 172 ವೆಚ್ಚ–11/2014 ದಿನಾಂಕ : 19–02–2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ಪುಟ್ಟೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**P.R. 466**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಬಿಸಿಡಬ್ಲ್ಯೂ 283 ಬಿಎಂಎಸ್ 2014, ಬೆಂಗಳೂರು, ದಿನಾಂಕ : 27–05–2014.**

ಸರ್ಕಾರಿ ಆದೇಶ ಸಂಖ್ಯೆ : ಹಿಂವಕ 487 ಬಿಎಂಎಸ್ 2013, ದಿನಾಂಕ : 4–12–2013ರ ಅನುಬಂಧ–1 ಕ್ರಮ ಸಂಖ್ಯೆ : 26ರ ವಿದ್ಯಾರ್ಥಿನಿಲಯದ ಸ್ಥಳ **ಯಾದಗಿರಿ ಟೌನ್** ಎಂಬುದರ ಬದಲಾಗಿ **ಸುರಪುರ ಟೌನ್** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 467**

**SC-100**

## ಕಂದಾಯ ಸಚಿವಾಲಯ

**ವಿಷಯ :** ಹಿಂದೂ ರುದ್ರಭೂಮಿಗಳ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಮಾರ್ಗಸೂಚಿ ಹೊರಡಿಸುವ ಕುರಿತು

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ : ಎಡಿಎಂ 3(ಎ) ಎಲ್‌ಎನ್‌ಡಿ 185/2010–11, ದಿನಾಂಕ : 21–06–2012.

**ಪ್ರಸ್ತಾವನೆ :**

ಸರ್ಕಾರವು 2011–12ನೇ ಸಾಲಿನಿಂದ ಕಂದಾಯ ಇಲಾಖೆಯ ಮುಜರಾಯಿ ಶಾಖೆಯಲ್ಲಿ ಹಿಂದೂ ರುದ್ರಭೂಮಿಗಳ ಅಭಿವೃದ್ಧಿ/ಆಧುನೀಕರಣಗೊಳಿಸಲು ಯೋಜನೆ ಜಾರಿಗೊಳಿಸಿದೆ. ಇಲಾಖೆಗೆ ಇದೊಂದು ಹೊಸ ಯೋಜನೆಯಾಗಿದೆ.

ಈ ಯೋಜನೆಯ ಅನುಷ್ಠಾನಕ್ಕಾಗಿ ಇಲಾಖೆಯ ಲೆಕ್ಕ ಶೀರ್ಷಿಕೆ 2250–00–800–1–14–ರುದ್ರಭೂಮಿಗಳ ಆಧುನೀಕರಣ–125 (ಯೋಜನೇತರ) ಅಡಿಯಲ್ಲಿ 2013–14ನೇ ಸಾಲಿನಲ್ಲಿ ರೂ. 1500.00 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಹೀಗೆ ಒದಗಿಸಲಾದ ಅನುದಾನದಲ್ಲಿ ಈ ಯೋಜನೆಯನ್ನು ಜಾರಿಗೊಳಿಸಲು ಆಯವ್ಯಯದಲ್ಲಿ ಒದಗಿಸುವ ಅನುದಾನವನ್ನು ಹಂತ ಹಂತವಾಗಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಮಂಜೂರು ಮಾಡಲಾಗುತ್ತಿದೆ. ಹೀಗೆ ಮಂಜೂರು ಮಾಡಲಾದ ಅನುದಾನವನ್ನು ಎಲ್ಲಾ ಜಿಲ್ಲಾಧಿಕಾರಿಗಳಿಗೂ ಆಯುಕ್ತರ ಮೂಲಕ ಬಿಡುಗಡೆ ಮಾಡಲಾಗುತ್ತಿದೆ.

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಹಿಂದೂ ರುದ್ರಭೂಮಿಗಳ ಆಧುನೀಕರಣಕ್ಕಾಗಿ ಈ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಅನುಸರಿಸಬೇಕಾದ ಕ್ರಮಗಳ ಕುರಿತು ಕರಡು ಮಾರ್ಗಸೂಚಿಯನ್ನು ತಯಾರಿಸಿ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 115 ಮುಅಬಿ 2013, ಬೆಂಗಳೂರು, ದಿನಾಂಕ : 22ನೇ ಜೂನ್ 2013.**

2011–12ನೇ ಸಾಲಿನಿಂದ ಕಂದಾಯ ಇಲಾಖೆಯ ಮುಜರಾಯಿ ಶಾಖೆಯಲ್ಲಿ ಜಾರಿಗೆ ತಂದಿರುವ ಹಿಂದೂ ರುದ್ರಭೂಮಿಗಳ ಆಧುನೀಕರಣ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅನುವಾಗುವಂತೆ ಈ ಆದೇಶದ ಅನುಬಂಧದಲ್ಲಿರುವ ಮಾರ್ಗಸೂಚಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಅನುಮೋದನೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಮುಜರಾಯಿ).

**ಸರ್ಕಾರದ ಆದೇಶ ಸಂಖ್ಯೆ : ಕಂಇ 115 ಮುಅಬಿ 2013, ಬೆಂಗಳೂರು, ದಿನಾಂಕ : 22ನೇ ಜೂನ್ 2013ರ ಅನುಬಂಧ**

**ಹಿಂದೂ ರುದ್ರಭೂಮಿಗಳ ಅಭಿವೃದ್ಧಿ ನವೀಕರಣದ ಮಾರ್ಗಸೂಚಿ**

1) **ಹಿಂದೂಗಳ ರುದ್ರಭೂಮಿಗಳ ಚಿತಾಗಾರ ನಿರ್ಮಾಣ :–** ಪ್ರಾರಂಭಿಕ ಹಂತದಲ್ಲಿ ಈ ಯೋಜನೆಯನ್ನು ರಾಜ್ಯದ ಎಲ್ಲಾ ತಾಲ್ಲೂಕು ಕೇಂದ್ರ ಹಾಗೂ ಹೋಬಳಿ ಕೇಂದ್ರಗಳಲ್ಲಿ ಜಾರಿಗೊಳಿಸುವುದು ಹಾಗೂ ಕ್ರಮೇಣ ಗ್ರಾಮಾಂತರ ಪ್ರದೇಶಗಳಿಗೆ ವಿಸ್ತರಿಸಲಾಗುವುದು. ಪ್ರತಿ ತಾಲ್ಲೂಕು ಕೇಂದ್ರ ಹಾಗೂ ಪ್ರತಿ ಹೋಬಳಿ ಕೇಂದ್ರಗಳಲ್ಲಿ ಉರುವಲು ರುದ್ರಭೂಮಿ/ಚಿತಾಗಾರವನ್ನು ಕಡ್ಡಾಯವಾಗಿ ಸ್ಥಾಪಿಸುವುದು. ಈಗಾಗಲೇ ರುದ್ರಭೂಮಿಗಳು ಇದ್ದು ನಾದುರುಸ್ಥಿಯಲ್ಲಿದ್ದರೆ, ಅದರ ನವೀಕರಣವನ್ನು ಕೈಗೆತ್ತಿಗೊಳ್ಳುವುದು.

2) ರುದ್ರಭೂಮಿಗಳನ್ನು ಹೊಸದಾಗಿ ಸ್ಥಾಪಿಸಬೇಕಾದಲ್ಲಿ ಸರ್ಕಾರದ ಕಂದಾಯ ಇಲಾಖೆ ಅಥವಾ ನಗರಸಭೆ/ಪಟ್ಟಣ ಪಂಚಾಯಿತಿಯವರು ರುದ್ರಭೂಮಿಗಳಿಗೆ ಮೀಸಲಿರಿಸಿದ ಜಮೀನು/ನಿವೇಶನದಲ್ಲಿ ಸ್ಥಾಪಿಸುವುದು ನಿವೇಶನ ಇಲ್ಲದಿರುವ ಪ್ರದೇಶಗಳಲ್ಲಿ ನಿವೇಶನ ಪಡೆದು ಸ್ಥಾಪಿಸುವುದು.

3) **ರುದ್ರಭೂಮಿ/ಚಿತಾಗಾರಗಳ ವಿನ್ಯಾಸ :–** ತಾಲ್ಲೂಕು ಕೇಂದ್ರ ಹಾಗೂ ಹೋಬಳಿ ಕೇಂದ್ರಗಳಲ್ಲಿ ಸ್ಥಾಪಿಸಬೇಕಾದ ರುದ್ರಭೂಮಿಗಳಲ್ಲಿ ಇರಬೇಕಾದ ಕಟ್ಟಡ ಹಾಗೂ ಸೌಲಭ್ಯಗಳು :–

   (1) ಜಮೀನಿನ ಲಭ್ಯತೆಗೆ ಅನುಸಾರ ಕನಿಷ್ಠ 10 ಗುಂಟೆ ಗರಿಷ್ಠ ಒಂದು ಎಕರೆ ಜಮೀನು.

   (2) ರುದ್ರಭೂಮಿಯ ವಿನ್ಯಾಸವು 50 ಮೀಟರ್ ಅಗಲ 80 ಮೀಟರ್ ಉದ್ದದ ವಿಸ್ತೀರ್ಣದಲ್ಲಿ ಸ್ಥಾಪಿಸತಕ್ಕದ್ದು.

   (3) ತಾಲ್ಲೂಕು ಕೇಂದ್ರದ ರುದ್ರಭೂಮಿಯಲ್ಲಿ ಕನಿಷ್ಠ ಎರಡು ಚಿತಾಗಾರಗಳು, ಸ್ನಾನಗೃಹ, ಶೌಚಾಲಯ, ದೇವರಗುಡಿ, ಕಾವಲುಗಾರರ ತಂಗುದಾಣ, ವಿಧಿವಿಧಾನ ವೇದಿಕೆ, ಕಲ್ಲುಬೆಂಚುಗಳು, ನೀರಿನ ಸೌಕರ್ಯ, ಹೋಬಳಿ ಕೇಂದ್ರಗಳಲ್ಲಿನ ರುದ್ರಭೂಮಿಗಳಲ್ಲಿ ಅವಶ್ಯಕತೆಗನುಗುಣವಾಗಿ ವಿನ್ಯಾಸ ಹೊಂದಿರಬೇಕು. ಮೇಲ್ಕಂಡಂತೆ ಅಂದಾಜುಪಟ್ಟಿಯನ್ನು ಲೋಕೋಪಯೋಗಿ ಇಲಾಖೆ ಅಥವಾ ಜಿಲ್ಲಾ ಪಂಚಾಯಿತಿ ನಿರ್ಮಿತಿ ಕೇಂದ್ರಗಳಂತಹ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಂದ ತಯಾರಿಸಿದ ಕಾಮಗಾರಿಯನ್ನು ಅವುಗಳ ಮೂಲಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕ ಕಾಯ್ದೆಯನ್ವಯ ಅನುಷ್ಠಾನಗೊಳಿಸತಕ್ಕದ್ದು.

(4) **ಆಡಳಿತಾತ್ಮಕ ಮಂಜೂರಾತಿ :–** ರುದ್ರಭೂಮಿಗಳ ಅಂದಾಜುಪಟ್ಟಿಗೆ ಅಂದಾಜು ಮೊತ್ತದ ಮಿತಿಯನ್ನಾಧರಿಸಿ ಸರ್ಕಾರವು ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಸಂಬಂಧಿಸಿದ ಪ್ರಾಧಿಕಾರಗಳು ಮಂಜೂರಾತಿಯನ್ನು ನೀಡತಕ್ಕದ್ದು.

(5) **ಅನುದಾನ ಬಿಡುಗಡೆ :–** ಆಯಾಯ ತಾಲ್ಲೂಕು ತಹಶೀಲ್ದಾರರು ಅಂದಾಜು ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿ, ಜಿಲ್ಲಾಧಿಕಾರಿಗಳು ಆ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಂದ ಬಂದಿರುವ ಪ್ರಸ್ತಾವನೆಗಳನ್ನು ಕ್ರೋಢೀಕರಿಸಿ ತಮ್ಮ ಸ್ಪಷ್ಟ ಅಭಿಪ್ರಾಯದೊಂದಿಗೆ

ಧಾರ್ಮಿಕ ಮತ್ತು ದತ್ತಿ ಆಯುಕ್ತರಿಗೆ ಸಲ್ಲಿಸತಕ್ಕದ್ದು. ಧಾರ್ಮಿಕ ದತ್ತಿ ಆಯುಕ್ತರು ಅನುದಾನ ಲಭ್ಯತೆಯ ಆಧಾರದಲ್ಲಿ ಪ್ರತಿಯೊಂದಿ ಜಿಲ್ಲೆಗೂ ಆದ್ಯತೆ ನೀಡಿ ಅವಶ್ಯಕತೆಗೆ ಅನುಗುಣವಾಗಿ ಅನುದಾನವನ್ನು ಜಿಲ್ಲಾಧಿಕಾರಿಗಳಿಗೆ ಒದಗಿಸತಕ್ಕದ್ದು. ಜಿಲ್ಲಾಧಿಕಾರಿಗಳು/ಸಂಬಂಧಿಸಿದ ಪ್ರಾಧಿಕಾರಿಗಳು ಅಂದಾಜು ಪಟ್ಟಿ/ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ ಅನುದಾನವನ್ನು ಆಯಾ ತಹಶೀಲ್ದಾರ್‌ವರಿಗೆ ಬಿಡುಗಡೆ ಮಾಡತಕ್ಕದ್ದು.

(6) ಕಾಮಗಾರಿಯನ್ನು ನಿರ್ದಿಷ್ಟ ಸಮಯದೊಳಗೆ ಕಾರ್ಯಗತಗೊಳಿಸುವ ಜವಾಬ್ದಾರಿಯು ಆಯಾಯ ತಹಶೀಲ್ದಾರರಾಗಿದ್ದು. ಅವರು ಕಾಮಗಾರಿಯನ್ನು ಸಂಬಂಧಪಟ್ಟ ಲೋಕೋಪಯೋಗಿ ಇಲಾಖೆ/ಜಿಲ್ಲಾ ಪಂಚಾಯಿತಿ/ನಿರ್ಮಿತಿ ಕೇಂದ್ರದವರಿಗೆ ಕಾಮಗಾರಿ ಆದೇಶ ನೀಡಿ, ಕಾಮಗಾರಿಯ ಪ್ರಗತಿಗೆ ಅನುಗುಣವಾಗಿ ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.

(7) ಕಾಮಗಾರಿ ಪೂರ್ಣಗೊಂಡ ನಂತರ ಅಂತಿಮ ಬಿಲ್ಲನ್ನು ಪಾವತಿಸಿದ ನಂತರದಲ್ಲಿ ತಹಶೀಲ್ದಾರ್‌ರವರು ಅನುದಾನ ಬಳಕೆ ಪತ್ರವನ್ನು ಜಿಲ್ಲಾಧಿಕಾರಿಗಳ ಮೂಲಕ ಧಾರ್ಮಿಕ ದತ್ತಿ ಆಯುಕ್ತರಿಗೆ ಕಳುಹಿಸತಕ್ಕದ್ದು. ಧಾರ್ಮಿಕ ಮತ್ತು ದತ್ತಿ ಆಯುಕ್ತರು ಬಳಕೆ ಪತ್ರವನ್ನು ಮೇಲುಸಹಿ ಮಾಡಿ ಮಹಾಲೇಖಪಾಲರಿಗೆ ಕಳುಹಿಸತಕ್ಕದ್ದು.

(8) ಜಿಲ್ಲಾ ಕೇಂದ್ರಗಳಲ್ಲಿರುವ ರುದ್ರಭೂಮಿ/ಚಿತಾಗಾರಗಳನ್ನು ಕೂಡ ಅನುದಾನದ ಲಭ್ಯತೆಗೆ ಅನುಗುಣವಾಗಿ ಪುನರುತ್ಥಾನ ಅಥವಾ ಅಭಿವೃದ್ಧಿ ಪಡಿಸುವುದಾದಲ್ಲಿ ಮೇಲೆ ತಿಳಿಸಿರುವ ಷರತ್ತು ಮತ್ತು ಮಾರ್ಗಸೂಚಿಗಳಿಗನುಸಾರವಾಗಿ ಕಾರ್ಯಗತಗೊಳಿಸತಕ್ಕದ್ದು.

**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಮುಜರಾಯಿ).

**P.R. 555**
**SC-25**

## REVENUE SCRETARIAT

**Subject :** Continuation of the term of the Office of the Administrator, Sri Vyasaraja Mutt (Sosale), Mysore District for one more year.

**Reference :** Government Order No. RD 67 MUDAPRA 2002, dated : 26.05.2012

**Preamble:-**

The State Government order read above, the Government took over the administration of Sri Vyasaraja Mutt (Sosale) on 26.05.2012 and appointed Sri. K. Jairaj, I.A.S., (Retd.,) as the Administrator. As the term of the office of the Administrator is closing on 25.05.2014, the Government is pleased to continue the term of the office for one more year. Hence the order.

**Government Order No. RD 34 MUSEVI 2014, Bangalore; dated: 24th May, 2014**

In view of the circumstances explained in the preamble, the services of Sri K. Jairaj, I.A.S., (Retd.,) who was appointment as Administrator of Sri Vyasaraj Mutt (Sosale) vide Government Order No. RD 67 MUDAPRA 2002 dated: 26.05.2012 is extended for one more year from 26.05.2014.

By Order and in the name of the Governor of Karnataka,

**C.T. Jayaramegowda**
Under Secretary to Government
Revenue Department (Muzrai).

**P.R. 556**
**SC-50**

## ಕಂದಾಯ ಸಚಿವಾಲಯ

**ವಿಷಯ :** ದೇವಸ್ಥಾನಗಳು ಮತ್ತು ಇತರ ಧಾರ್ಮಿಕ ಸಂಸ್ಥೆಗಳಿಗೆ ತಸ್ಥೀಕ್ ಮೊತ್ತವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಕಂಇ 3 ಮುತಬ 2006, ದಿನಾಂಕ : 29-06-2006.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 4 ಮುತಬ 2010, ದಿನಾಂಕ : 14-09-2010.
3. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ : ಎಡಿಎಂ 2 ಐಎನ್‌ಎ ಸಿಆರ್ 61/2007-08, ದಿನಾಂಕ : 29-11-2012.
4. ಆರ್ಥಿಕ ಇಲಾಖೆ ಸಹಮತಿ ಟಿಪ್ಪಣಿ ಸಂ. ಎಫ್‌ಡಿ/34/ವೆಚ್ಚ-7/2013, ದಿನಾಂಖ : 25-02-2013.
5. ಈ ಪ್ರಸ್ತಾವನೆ ಬಗ್ಗೆ ಸಚಿವ ಸಂಪುಟದ ಅನುಮೋದನೆ ಪ್ರಕರಣ ಸಂಖ್ಯೆ : ಸಿ/272/2013, ದಿನಾಂಕ : 12-03-2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ (ಮತೀಯ ಮತ್ತು ಧರ್ಮಾರ್ಥ) ಇನಾಂ ರದ್ದಿಯಾತಿ ಕಾಯಿದೆ 1955 ಮತ್ತು ಕರ್ನಾಟಕ ಹಲವು ಇನಾಂ ರದ್ದಿಯಾತಿ ಕಾಯಿದೆ 1977ರನ್ವಯ ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು ಹೊಂದಿದ್ದ ಇನಾಂ ಜಮೀನುಗಳಿಗೆ ಪರಿಹಾರಾರ್ಥವಾಗಿ ತಸ್ಥೀಕ್ ಮೊತ್ತವನ್ನು ನಿಗಧಿಪಡಿಸಿ, ಪಾವತಿಸಲಾಗುತ್ತಿದ್ದು, ಅದರಂತೆ ವಾರ್ಷಿಕವಾಗಿ ರೂ. 5,999/- ಗಳಿಗಿಂತ ಕಡಿಮೆ ತಸ್ಥೀಕ್ ನಿಗಧಿಯಾಗಿರುವ ಸಂಸ್ಥೆಗಳಿಗೆ ರೂ. 6,000/-ಕ್ಕೆ ಹೆಚ್ಚಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದಲ್ಲಿ ವಾರ್ಷಿಕವಾಗಿ ರೂ. 5,999/–ಕ್ಕಿಂತ ಕಡಿಮೆ ತಸ್ಥೀಕ್ ಮೊತ್ತ ನಿಗಧಿಪಡಿಸಿರುವ ಧಾರ್ಮಿಕ ಮತ್ತು ಧರ್ಮಾದಾಯ ಸಂಸ್ಥೆಗಳಿಗೆ ವಾರ್ಷಿಕವಾಗಿ ಕನಿಷ್ಠ ರೂ. 6,000/–ಗಳ ತಸ್ಥೀಕ್ ಮೊತ್ತವನ್ನು ನೀಡುತ್ತಿದ್ದು. ವಾರ್ಷಿಕವಾಗಿ ರೂ. 12,000/–ಕ್ಕೆ ಹೆಚ್ಚಿಸಿ 2010–11ನೇ ಸಾಲಿನಿಂದ ಜಾರಿಗೆ ಬರುವಂತೆ ಆದೇಶಿಸಿದೆ.

ಮೇಲೆ (3)ರಲ್ಲಿ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ ಹಾಲಿ ದೇವಾಲಯಗಳ ಪೂಜಾ ಸಾಮಾಗ್ರಿಗಳು, ನೈವೇದ್ಯಕ್ಕೆ ಅಕ್ಕಿ, ದೀಪದ ಎಣ್ಣೆ, ಹೂ, ಹಣ್ಣು ಇತ್ಯಾದಿಗಳ ಧಾರಣೆಯು ನಾಲ್ಕುಪಟ್ಟು ಹೆಚ್ಚಾಗಿದ್ದು, ದ್ವಿಗುಣಗೊಂಡಿದ್ದು, ದಿನವೊಂದಕ್ಕೆ ದೇವಸ್ಥಾನದ ಪೂಜೆಗಾಗಿ ಕನಿಷ್ಠ ರೂ. 50/– ಅಲ್ಲದೇ ಅರ್ಚಕರ ಸಂಭಾವನೆಯನ್ನು ದಿನವೊಂದಕ್ಕೆ ರೂ. 50/– ರಂತೆ ಒಟ್ಟು ರೂ. 100/–ರ ಅವಶ್ಯಕತೆ ಇದೆ. ಅಂದರೆ, ಮಾಸಿಕ ರೂ. 3000/–ದಂತೆ ವರ್ಷಕ್ಕೆ ರೂ. 36,000/–ಗಳ ಅವಶ್ಯಕತೆ ಇರುತ್ತದೆ. ಆದರೆ ಸರ್ಕಾರದ ರಾಜ್ಯ ಬೊಕ್ಕಸಕ್ಕೆ ಆರ್ಥಿಕ ಹೊರೆಯಾಗದಂತೆ ದೇವಾಲಯಗಳಲ್ಲಿ ನಡೆಯುವ ಪೂಜಾ ಕೈಂಕರ್ಯಗಳನ್ನು ಸರಾಗವಾಗಿ ನಡೆಸಿಕೊಂಡು ಹೋಗುವ ಹಿತದೃಷ್ಟಿಯಿಂದ ತಸ್ಥೀಕ್ ಮೊತ್ತವನ್ನು ಹೆಚ್ಚಿಸುವುದು ಸೂಕ್ತ ಹಾಗೂ ಸಮರ್ಥನೀಯವಾಗಿರುವುದರಿಂದ ಈ ಪರಿಷ್ಕರಣೆಯನ್ನು ರೂ. 24,000/–ಗಳಿಗೆ ಸೀಮಿತಗೊಳಿಸಲು ರಾಜ್ಯ ಧಾರ್ಮಿಕ ಪರಿಷತ್ ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ತಸ್ಥೀಕ್ ಮೊತ್ತವನ್ನು ಹಾಲಿ ರೂ. 12,000/–ಗಳಿಗಿಂತ ಕಡಿಮೆ ಮೊತ್ತ ಪಡೆಯುತ್ತಿರುವ ಎಲ್ಲಾ ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳಿಗೆ ಹೆಚ್ಚಿಸುವಂತೆ ಆಯುಕ್ತರು ಶಿಫಾರಸ್ಸು ಮಾಡಿರುವರು.

ಆರ್ಥಿಕ ಇಲಾಖೆಯು ಓದಲಾದ (4) ದಿನಾಂಕ : 25–02–2013ರ ಸಹಮತಿ ಟಿಪ್ಪಣಿಯಲ್ಲಿ ರಾಜ್ಯದಲ್ಲಿ ಈ ಹಿಂದೆ ರೂ. 11,999/– ತಸ್ಥೀಕ್ ಭತ್ಯೆ ಪಡೆಯುತ್ತಿರುವ ಹಾಗು ಈಗ ಪಡೆಯದೇ ಇರುವ 361 ದೇವಾಲಯಗಳಿಗೆ ಮಾತ್ರ ರೂ. 24,000/–ಕ್ಕೆ ಹೆಚ್ಚಿಸಲು ಸಹಮತಿ ನೀಡಿದೆ.

ಆದರೆ, ರಾಜ್ಯದ ಎಲ್ಲಾ ದೇವಾಲಯಗಳ ತಸ್ಥೀಕ್ ಮೊತ್ತವನ್ನು ಹೆಚ್ಚಿಸದೇ ಹೋದಲ್ಲಿ, ತಾರತಮ್ಯವಾಗುವುದು ಹಾಗೂ ಸಾಮಾಜಿಕ ನ್ಯಾಯ ಒದಗಿಸಿದಂತಾಗುವುದಿಲ್ಲವೆಂದು ಸರ್ಕಾರ ಚಿಂತಿಸಿ, ಈ ಪ್ರಸ್ತಾವನೆಯನ್ನು ದಿನಾಂಕ : 12–03–2013ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಮಂಡಿಸಲಾಗಿತ್ತು. ಅದರಂತೆ, ಸಚಿವ ಸಂಪುಟ ಸಭೆಯು ರೂ. 24,000/– ಕ್ಕಿಂತ ಕಡಿಮೆ ತಸ್ಥೀಕ್ ಮೊತ್ತ ಪಡೆಯುತ್ತಿರುವ ಒಟ್ಟು 26,988 ಸಂಸ್ಥೆಗಳಿಗೆ ವಾರ್ಷಿಕವಾಗಿ ತಸ್ಥೀಕ್ ಮೊತ್ತವನ್ನು ರೂ. 24,000/–ಗಳಿಗೆ ಹೆಚ್ಚಿಸುವ ಪ್ರಸ್ತಾವನೆಗೆ ಅನುಮೋದನೆ ನೀಡಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 10 ಮುತಬ 2012, ಬೆಂಗಳೂರು, ದಿನಾಂಕ : 21ನೇ ಜೂನ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಹಾಲಿ ರೂ. 12,000/– ತಸ್ಥೀಕ್ ಹಣ ಪಡೆಯುತ್ತಿರುವ 26850 ಸಂಸ್ಥೆಗಳು ಹಾಗೂ ರೂ. 12,000/– ದಿಂದ ರೂ. 23,999/– ರವರೆಗೆ ತಸ್ಥೀಕ್ ಪಡೆಯುತ್ತಿರುವ 138 ಸಂಸ್ಥೆಗಳು ಸೇರಿದಂತೆ ಒಟ್ಟು 26988 (ಇಪ್ಪತ್ತ ಆರು ಸಾವಿರದ ಒಂಬತ್ತ ನೂರ ಎಂಬತ್ತ ಎಂಟು) ಸಂಸ್ಥೆಗಳಿಗೆ 2013–14ನೇ ಆರ್ಥಿಕ ವರ್ಷದಿಂದ ಜಾರಿಗೆ ಬರುವಂತೆ ವಾರ್ಷಿಕವಾಗಿ ರೂ. 24,000/– (ಇಪ್ಪತ್ತು ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಹೆಚ್ಚಿಸಿ, ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಮಂಜೂರು ಮಾಡಲು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರಿಗೆ ಅನುಮತಿ ನೀಡಿ ಆದೇಶಿಸಿದೆ.

**ಷರತ್ತುಗಳು**

1. ಒಂದು ಧಾರ್ಮಿಕ ಸಂಸ್ಥೆಗೆ ವಿವಿಧ ಆದೇಶಗಳಲ್ಲಿ ತಸ್ಥೀಕ್ ಮೊತ್ತವನ್ನು ನಿಗಧಿಪಡಿಸಿ, ಆದೇಶಗಳನ್ನು ಹೊರಡಿಸಿದ್ದಲ್ಲಿ, ಪ್ರತಿಯೊಂದು ಆದೇಶದಲ್ಲಿ ನಿಗಧಿಪಡಿಸಿರುವ ತಸ್ಥೀಕ್ ಮೊತ್ತವನ್ನು ಕನಿಷ್ಠ ತಸ್ಥೀಕ್ ಮೊತ್ತ ರೂ. 24,000/– ಗಳಿಗೆ ಹೆಚ್ಚಿಸತಕ್ಕದ್ದಲ್ಲ ;
2. ಎಲ್ಲಾ ವಿವಿಧ ಆದೇಶಗಳಲ್ಲಿನ ಕ್ರೋಢೀಕೃತ ತಸ್ಥೀಕ್ ಮೊತ್ತ ರೂ. 24,000/– ಗಳಿಗೆ ಕಡಿಮೆ ಇದ್ದಲ್ಲಿ ಮಾತ್ರ ರೂ. 24,000/–ಗಳಿಗೆ ತಸ್ಥೀಕ್ ಮೊತ್ತವನ್ನು ಹೆಚ್ಚಿಸುವ ಷರತ್ತಿಗೆ ಒಳಪಡಿಸಿದೆ.

ಸದರಿ ಮೊತ್ತವನ್ನು ತಸ್ಥೀಕ್ ಲೆಕ್ಕ ಶೀರ್ಷಿಕೆ "2075–00–101–1–01–(100) ಯೋಜನೇತರ ಇನಾಂ ರದ್ದಿಯಾತಿ ಅಧಿನಿಯಮದ ಮೇರೆಗೆ ನೀಡುವ ಮೊಬಲಗು–ತಸ್ಥೀಕ್ ಮೊತ್ತ (ಯೋಜನೇತರ)" ರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 557**
**SC-150**

**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

## ಕಂದಾಯ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕಿನ ವ್ಯಾಪ್ತಿಗೆ ಬರುವ ಧಾರ್ಮಿಕ ಸಂಸ್ಥೆಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಎಡಿಎಂ/05/ಸಿಆರ್/444/2007–08, ದಿನಾಂಕ : 29–05–2012.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕಿನ ವ್ಯಾಪ್ತಿಗೆ ಬರುವ ಕೆಲವು ಧಾರ್ಮಿಕ ಸಂಸ್ಥೆಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸುವ ಕುರಿತಂತೆ ದಿನಾಂಕ : 23–04–2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದ ಮೇರೆಗೆ ಈ ಕೆಳಕಂಡ 12 ದೇವಾಲಯಗಳನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡೆಗೊಳಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ :–

| ಕ್ರಮ ಸಂಖ್ಯೆ | ಗ್ರಾಮ ಹೆಸರು | ದೇವಾಲಯದ ಹೆಸರು |
|---|---|---|
| 1. | ಪ್ಯಾಲಸಮುದ್ರ | ಶ್ರೀ ಬಸವಣ್ಣ ದೇವರ ದೇವಸ್ಥಾನ |
| 2. | ಅಂತನಹಳ್ಳಿ | ಶ್ರೀ ಈಶ್ವರ ದೇವರ ದೇವಸ್ಥಾನ |
| 3. | ಬಿ. ಹೊನ್ನೇನಹಳ್ಳಿ | ಶ್ರೀ ಬಸವಣ್ಣ ದೇವರ ದೇವಸ್ಥಾನ |

| ಕ್ರಮ ಸಂಖ್ಯೆ | ಗ್ರಾಮ ಹೆಸರು | ದೇವಾಲಯದ ಹೆಸರು |
|---|---|---|
| 4. | ವಡ್ಡರಹಳ್ಳಿ | ಶ್ರೀ ಈಶ್ವರ ದೇವರ ದೇವಸ್ಥಾನ |
| 5. | ಸಾತೇನಹಳ್ಳಿ | ಶ್ರೀ ಈಶ್ವರ ದೇವರ ದೇವಸ್ಥಾನ |
| 6. | ಮುದ್ದನಹಳ್ಳಿ | ಶ್ರೀ ಆಂಜನೇಯ ದೇವರ ದೇವಸ್ಥಾನ |
| 7. | ಕಾರೇಕರೆ | ಶ್ರೀ ಆಂಜನೇಯ ದೇವರ ದೇವಸ್ಥಾನ |
| 8. | ಬ್ಯಾಡರಹಳ್ಳಿ | ಶ್ರೀ ಉಡುಸಲಮ್ಮ ದೇವರ ದೇವಸ್ಥಾನ |
| 9. | ದಿಂಡಗೂರು | ಶ್ರೀ ಗೌರಿ ಗಣೇಶ ದೇವರ ದೇವಸ್ಥಾನ |
| 10. | ಹೊನ್ನಮಾರನಹಳ್ಳಿ | ಶ್ರೀ ಮಹಾಲಿಂಗೇಶ್ವರ ದೇವರ ದೇವಸ್ಥಾನ |
| 11. | ಕಲ್ಲೆಸೋಮನಹಳ್ಳಿ | ಶ್ರೀ ಬಸವಣ್ಣ ದೇವರ ದೇವಸ್ಥಾನ |
| 12. | ಶೆಟ್ಟಿಹಳ್ಳಿ | ಶ್ರೀ ಬಸವಣ್ಣ ದೇವರ ದೇವಸ್ಥಾನ |

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 84 ಮುಆಬಿ 2012, ಬೆಂಗಳೂರು, ದಿನಾಂಕ : 01ನೇ ಜುಲೈ, 2013.**

ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕಿನ ವ್ಯಾಪ್ತಿಗೆ ಬರುವ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಈ ಕೆಳಕಂಡ 12 ಧಾರ್ಮಿಕ ಸಂಸ್ಥೆಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಅಧಿನಿಯಮ, (1997)ರ ಕಲಂ 23 ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಗ್ರಾಮ ಹೆಸರು | ದೇವಾಲಯದ ಹೆಸರು |
|---|---|---|
| 1. | ಪ್ಯಾಲಸಮುದ್ರ | ಶ್ರೀ ಬಸವಣ್ಣ ದೇವರ ದೇವಸ್ಥಾನ |
| 2. | ಅಂತನಹಳ್ಳಿ | ಶ್ರೀ ಈಶ್ವರ ದೇವರ ದೇವಸ್ಥಾನ |
| 3. | ಬಿ. ಹೊನ್ನೇನಹಳ್ಳಿ | ಶ್ರೀ ಬಸವಣ್ಣ ದೇವರ ದೇವಸ್ಥಾನ |
| 4. | ವಡ್ಡರಹಳ್ಳಿ | ಶ್ರೀ ಈಶ್ವರ ದೇವರ ದೇವಸ್ಥಾನ |
| 5. | ಸಾತೇನಹಳ್ಳಿ | ಶ್ರೀ ಈಶ್ವರ ದೇವರ ದೇವಸ್ಥಾನ |
| 6. | ಮುದ್ದನಹಳ್ಳಿ | ಶ್ರೀ ಆಂಜನೇಯ ದೇವರ ದೇವಸ್ಥಾನ |
| 7. | ಕಾರೇಕರೆ | ಶ್ರೀ ಆಂಜನೇಯ ದೇವರ ದೇವಸ್ಥಾನ |
| 8. | ಬ್ಯಾಡರಹಳ್ಳಿ | ಶ್ರೀ ಉಡುಸಲಮ್ಮ ದೇವರ ದೇವಸ್ಥಾನ |
| 9. | ದಿಂಡಗೂರು | ಶ್ರೀ ಗೌರಿ ಗಣೇಶ ದೇವರ ದೇವಸ್ಥಾನ |
| 10. | ಹೊನ್ನಮಾರನಹಳ್ಳಿ | ಶ್ರೀ ಮಹಾಲಿಂಗೇಶ್ವರ ದೇವರ ದೇವಸ್ಥಾನ |
| 11. | ಕಲ್ಲೆಸೋಮನಹಳ್ಳಿ | ಶ್ರೀ ಬಸವಣ್ಣ ದೇವರ ದೇವಸ್ಥಾನ |
| 12. | ಶೆಟ್ಟಿಹಳ್ಳಿ | ಶ್ರೀ ಬಸವಣ್ಣ ದೇವರ ದೇವಸ್ಥಾನ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**PR. 558**
**SC-50**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆ, ಗೋವಿಂದರಾಜನಗರ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10–10–2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17–01–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–10–2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17–01–2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ, ಬೆಂಗಳೂರು ನಗರ ಜಿಲ್ಲೆ, ಗೋವಿಂದರಾಜನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 22 ಮುಸರ 2013, ಬೆಂಗಳೂರು, ದಿನಾಂಕ : 04ನೇ ಮಾರ್ಚ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲೆ, ಗೋವಿಂದರಾಜನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ಅಧ್ಯಕ್ಷರು ಮತ್ತು ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1. | ಶ್ರೀ ರವಿ ಎಲ್.ಹೆಚ್. ನಂ. 16, 2ನೇ ಮುಖ್ಯ ರಸ್ತೆ, 9ನೇ ಅಡ್ಡ ರಸ್ತೆ, ಪ್ರಶಾಂತನಗರ, ಬೆಂಗಳೂರು–079. | ಅಧ್ಯಕ್ಷರು |
| 2. | ಶ್ರೀ ಪಾಲಾಕ್ಷ, ನಂ. 9, 1ನೇ ಮುಖ್ಯ ರಸ್ತೆ, 2ನೇ ಅಡ್ಡ ರಸ್ತೆ, ಪಟ್ಟೆಗಾರಪಾಳ್ಯ, ಬೆಂಗಳೂರು–079. (ಸಾಮಾನ್ಯ) | ಸದಸ್ಯರು |
| 3. | ಶ್ರೀಮತಿ ಮಂಜುಳ ಕೆ.ಆರ್. ನಂ. 36, 1ನೇ ಮುಖ್ಯ ರಸ್ತೆ, 6ನೇ ಅಡ್ಡ ರಸ್ತೆ, ಎಸ್.ವಿ.ಜಿ. ರಸ್ತೆ, ಮೂಡಲಪಾಳ್ಯ, ಬೆಂಗಳೂರು–023 (ಮಹಿಳೆ) | ಸದಸ್ಯರು |
| 4. | ಶ್ರೀ ಶಂಕರಪ್ಪ, ನಂ. 17, 1ನೇ ಮುಖ್ಯ ರಸ್ತೆ, ಮಧುರಾನಗರ, ಅಂಬೇಡ್ಕರ್‌ನಗರ, ನಾಗರಭಾವಿ ಮುಖ್ಯ ರಸ್ತೆ, ಬೆಂಗಳೂರು–039. (ಪರಿಶಿಷ್ಟ ಜಾತಿ) | ಸದಸ್ಯರು |
| 5. | ಶ್ರೀ ಕೃಷ್ಣಯ್ಯ, ನಂ. 138, 6ನೇ ಮಾರೇನಹಳ್ಳಿ, ವಿಜಯನಗರ, ಬೆಂಗಳೂರು–040 (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**PR. 559**
**SC-25**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆ, ವಿಜಯನಗರ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10–10–2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17–01–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–10–2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17–01–2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ, ಬೆಂಗಳೂರು ನಗರ ಜಿಲ್ಲೆ, ವಿಜಯನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 23 ಮುಸರ 2013, ಬೆಂಗಳೂರು, ದಿನಾಂಕ : 04ನೇ ಮಾರ್ಚ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲೆ, ವಿಜಯನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ಅಧ್ಯಕ್ಷರು ಮತ್ತು ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1. | ಶ್ರೀ ಶಿವಶಂಕರ್, ನಂ. 723, 5ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು–040. | ಅಧ್ಯಕ್ಷರು |
| 2. | ಶ್ರೀ ಚೊಕ್ಕಣ್ಣ, ನಂ. 32, 2ನೇ ಮುಖ್ಯ ರಸ್ತೆ, 4ನೇ ಅಡ್ಡ ರಸ್ತೆ, ಹೊಸಹಳ್ಳಿ ಕಾಲೋನಿ, ವಿಜಯನಗರ, ಬೆಂಗಳೂರು–040. (ಸಾಮಾನ್ಯ) | ಸದಸ್ಯರು |
| 3. | ಶ್ರೀಮತಿ ಪಿ.ಕೆ. ಪದ್ಮಾಮಹಾಲಿಂಗು, ನಂ. 54,–ಹೆಚ್, 4ನೇ ಅಡ್ಡ ರಸ್ತೆ, ಟೆಲಿಕಾಂ ಲೇಔಟ್, ಬೆಂಗಳೂರು–023. (ಮಹಿಳೆ) | ಸದಸ್ಯರು |
| 4. | ಶ್ರೀ ಶಿವಣ್ಣ, ನಂ. 27, 2ನೇ ಬಿ–ಮುಖ್ಯ ರಸ್ತೆ, 2ನೇ ಹಂತ, ಬಾಪೂಜಿನಗರ, ಬೆಂಗಳೂರು–026. (ಪರಿಶಿಷ್ಟ ಜಾತಿ) | ಸದಸ್ಯರು |
| 5. | ಶ್ರೀ ಸಂಪತ್ ನಾಯಕ್, ನಂ. 24, 20 ನೇ ಅಡ್ಡ ರಸ್ತೆ, ಮಾಗಡಿ ರಸ್ತೆ, ಬೆಂಗಳೂರು–560023 (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**PR. 560**
**SC-25**

## ಕಂದಾಯ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ, ಮುಳಬಾಗಿಲು ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10–10–2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17–01–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–10–2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17–01–2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ, ಕೋಲಾರ ಜಿಲ್ಲೆ, ಮುಳಬಾಗಿಲು ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 157 ಮುಸರ 2013, ಬೆಂಗಳೂರು, ದಿನಾಂಕ : 04ನೇ ಮಾರ್ಚ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೋಲಾರ ಜಿಲ್ಲೆ, ಮುಳಬಾಗಿಲು ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ಅಧ್ಯಕ್ಷರು ಮತ್ತು ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1. | ಶ್ರೀ ಡಿ.ವಿ. ಜನಾರ್ಧನ ಶೆಟ್ಟಿ ಬಿನ್ ಡಿ. ವೆಂಕಟ್ರಾಮಯ್ಯ ಶೆಟ್ಟಿ, ನಂಗಲಿ ಗ್ರಾಮ ಮುಳಬಾಗಿಲು ತಾಲ್ಲೂಕು. (ಸಾಮಾನ್ಯ) | ಸದಸ್ಯರು |
| 2. | ಶ್ರೀಮತಿ ವಿ. ಶಾಂತಮ್ಮ ಕೋಂ ಸುಬ್ರಹ್ಮಣ್ಯ, ತಿಮ್ಮನಾಯಕನಹಳ್ಳಿ, ಮುಳಬಾಗಿಲು ತಾಲ್ಲೂಕು (ಮಹಿಳೆ) | ಸದಸ್ಯರು |
| 3. | ಶ್ರೀ ಕೆ.ಎನ್. ಚಿನ್ನಯ್ಯ ಬಿನ್ ತಳಾರಿ ನಾರಾಯಣಪ್ಪ, ಕೂತಾಂಡ್ಲಹಳ್ಳಿ, ಮುಳಬಾಗಿಲು ತಾಲ್ಲೂಕು (ಪರಿಶಿಷ್ಟ ಜಾತಿ) | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 4. | ಶ್ರೀ ಜಯಪ್ರಕಾಶ್ ನಾಯ್ಕ ಬಿನ್ ಕೃಷ್ಣಪ್ಪ ಎನ್. ಗಡ್ಡೂರು, ನಂಗಲಿ ಗ್ರಾಮ, ಮುಳಬಾಗಿಲು ತಾಲ್ಲೂಕು (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**PR. 561**

**SC-25**

## ಆರ್ಥಿಕ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಆಇ 12 ಎಸ್‌ಆರ್‌ಪಿ 2012(IX) ಬೆಂಗಳೂರು, ದಿನಾಂಕ: 18.06.2014.**

ದಿನಾಂಕ: 14.06.2012ರ ಸರ್ಕಾರಿ ಆದೇಶ ಸಂಖ್ಯೆ: ಆಇ 12 ಎಸ್‌ಆರ್‌ಪಿ 2012(IX)ರ ಕ್ರಮ ಸಂಖ್ಯೆ: 20ರ ಉಪ ಶೀರ್ಷಿಕೆ (2)ರಲ್ಲಿನ ನಮೂದುಗಳ ನಂತರ. ಈ ಕೆಳಗಿನ ನಮೂದುಗಳನ್ನು ಉಪಶೀರ್ಷಿಕೆ (2A) ಎಂದು ಸೇರಿಸಿಕೊಳ್ಳತಕ್ಕದ್ದು:

| | |
|---|---|
| (2A) Personal Establishment of Opposition Chief Whip, Legislative Assembly/ Legislative Council | |
| **a) Private Secretary :**<br>Officer above the Rank of Assistant Commissioner/ Under Secretary | 340 |
| **b) Other Staff:** | |
| i. Assistant/ Senior Assistant / Stenographer/ Senior Stenographer | 115 |
| ii. Junior Assistant/ Typist /Senior Typist | 110 |

ಈ ಆದೇಶಗಳು ಭವಿಷ್ಯಾವರ್ತಿಯಾಗಿ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

**PR. 573**

**SC. 100**

## ಆರ್ಥಿಕ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಆಇ 12 ಎಸ್‌ಆರ್‌ಪಿ 2012(XI) ಬೆಂಗಳೂರು, ದಿನಾಂಕ: 10.06.2014.**

ದಿನಾಂಕ: 10.06.2013ರ ಸರ್ಕಾರಿ ಆದೇಶ ಸಂಖ್ಯೆ: ಆಇ 12 ಎಸ್‌ಆರ್‌ಪಿ 2012(XI)ರ ಆದೇಶ ಭಾಗದ ಮೊದಲ ಖಂಡಿಕೆಯಲ್ಲಿ ನಮೂದಾಗಿರುವ **"ಅಂಗವಿಕಲತೆಯುಳ್ಳ ಸರ್ಕಾರಿ ನೌಕರರು"** ಎಂಬುದರ ಬದಲಿಗೆ **"ಅಂಗವಿಕಲ ಸರ್ಕಾರಿ ನೌಕರರು (ಅಂಧ, ಶ್ರವಣ ದೋಷವುಳ್ಳ ಸರ್ಕಾರಿ ನೌಕರರನ್ನು ಹೊರತುಪಡಿಸಿ)"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ರಾಜಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

**PR. 574**

**SC. 100**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಬಿ. ನಿಜಲಿಂಗಪ್ಪ, ಪತ್ರಾಂಕಿತ ಉಪಖಜಾನಾಧಿಕಾರಿ, ಖಜಾನೆ ಇಲಾಖೆ ಇವರು ಹಿಂದೆ ಉಪ ಖಜಾನೆ ಹಿರೇಕೆರೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರ ಮೇಲಿನ ಲಂಚ ಸ್ವೀಕಾರ ಪ್ರಕರಣದಲ್ಲಿ ಆರೋಪ ಸಾಬೀತಾಗಿರುವ ಹಿನ್ನೆಲೆಯಲ್ಲಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಆಇ 255 ಆಖಇ 2008 ದಿನಾಂಕ:04.06.2009

2) ಘನ ವಿಶೇಷ ನ್ಯಾಯಾಲಯ, ಹಾವೇರಿ ವಿಶೇಷ ಪ್ರಕರಣ ಸಂಖ್ಯೆ 4/2009ರಲ್ಲಿ ದಿನಾಂಕ: 03.07.2013 ರಂದು ನೀಡಿದ ತೀರ್ಪು.

3) ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್–57/ ಸಿಆರ್–6/2008/ಹೆಚ್‌ವಿಆರ್ ದಿ: 21.09.2013.

4) ಶ್ರೀ ಬಿ. ನಿಜಲಿಂಗಪ್ಪ ಅವರಿಗೆ ನೀಡಲಾದ ಕಾರಣ ಕೇಳುವ ನೋಟೀಸ್ ದಿ: 26.10.2013

5) ಕಾರಣ ಕೇಳುವ ನೋಟೀಸ್‌ಗೆ ಶ್ರೀ ಬಿ. ನಿಜಲಿಂಗಪ್ಪ ಅವರು ನೀಡಿದ ಸಮಜಾಯಿಷಿ ದಿ: 14.12.2013.

6) ಪತ್ರ ಸಂಖ್ಯೆ ಪಿಎಸ್‌ಸಿ 254 ಸಿಎನ್‌ಎಸ್/3 ದಿನಾಂಕ: 21.04.2014 ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರಿಂದ

ಪ್ರಸ್ತಾವನೆ:

ಶ್ರೀ ಬಿ. ನಿಜಲಿಂಗಪ್ಪ, ಸಹಾಯಕ ಖಜಾನಾಧಿಕಾರಿ, ಜಿಲ್ಲಾ ಖಜಾನೆ, ಕೋಲಾರ. ಅವರು ಈ ಹಿಂದೆ ಉಪ ಖಜಾನೆ, ಹಿರೇಕೇರೂರು, ಹಾವೇರಿ ಜಿಲ್ಲೆ ಇಲ್ಲಿ ಪತ್ರಾಂಕಿತ ಉಪ ಖಜಾನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಬಸವಣ್ಣಪ್ಪ ರಾಮಪ್ಪ ಹಿಂಗಳಗುಂಡಿ ಎಂಬ ಶಿಕ್ಷಕರಿಂದ ಅವರಿಗೆ ಮಂಜೂರಾದ ಸಾಮಾನ್ಯ ಭವಿಷ್ಯನಿಧಿಯ ಮಂಗಡದ ಹಣ ರೂ. 50,000/– ಗಳ ಚೆಕ್ ಪಾಸು ಮಾಡಲು ರೂ.500/–ಗಳನ್ನು ಕೇಳಿ ಅದನ್ನು ಪಡೆಯುತ್ತಿದ್ದಾಗಲೇ ದಿನಾಂಕ: 19.09.2008ರಂದು ಲೋಕಾಯುಕ್ತರ ಪೊಲೀಸರ ಬಲೆಗೆ ಸಿಕ್ಕಿ ಬಿದ್ದಿದ್ದಕ್ಕಾಗಿ ಇವರ ವಿರುದ್ಧ ಸರ್ಕಾರದ ಅನುಮತಿ ಮೇರೆಗೆ ಲಂಚ ನಿರೋಧಕ ಕಾಯ್ದೆ, 1988ರಡಿಯಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲಾಗಿತ್ತು. ಘನ ನ್ಯಾಯಾಧೀಶರು ಸದರಿ ಪ್ರಕರಣವನ್ನು ವಿಶೇಷ (LOK) ಪ್ರಕರಣ ಸಂಖ್ಯೆ: 4/2009ರಲ್ಲಿ ಅಂಗೀಕರಿಸಿಕೊಂಡು ವಿಚಾರಣೆ ಕೈಗೊಂಡ ಬಳಿಕ ಆಪಾದನೆಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ(2)ರ ದಿನಾಂಕ: 03.07.2013ರಂದು ನೀಡಿದ ತೀರ್ಪಿನಲ್ಲಿ ಲಂಚ ನಿರೋಧ ಕಾಯ್ದೆ 1988ರಡಿ ಬಿ. ನಿಜಲಿಂಗಪ್ಪ, ಸಹಾಯಕ ಖಜಾನಾಧಿಕಾರಿ, ಖಜಾನೆ ಇಲಾಖೆ, ಇವರನ್ನು ಅಪರಾಧಿಯೆಂದು ತೀರ್ಮಾನಿಸಿ, ಕಲಂ7, ಲಂಚ ನಿರೋಧ ಕಾಯಿದೆ 1988ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 1 ವರ್ಷ ಸಾದಾ ಶಿಕ್ಷೆ ಮತ್ತು ರೂ. 5000 ದಂಡ, ದಂಡ ಪಾವತಿಸಲು ವಿಫಲವಾದರೆ 3 ತಿಂಗಳು ಸಾದಾ ಶಿಕ್ಷೆ ಹಾಗೂ ಕಲಂ 13(1)ಡಿ ಸಹವಾಚನ 13(2) ಲಂಚ ನಿರೋಧ ಕಾಯಿದೆ 1988ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 2 ವರ್ಷ ಸಾದಾ ಶಿಕ್ಷೆ ಮತ್ತು ರೂ. 5000 ದಂಡ, ದಂಡ ಪಾವತಿಸಲು ವಿಫಲವಾದರೆ 6 ತಂಗಳು ಸಾದಾ ಶಿಕ್ಷೆ ವಿಧಿಸಿರುತ್ತಾರೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಕ್ರಮಸಂಖ್ಯೆ(3)ರ ತಮ್ಮ ಪತ್ರದಲ್ಲಿ ವಿಚಾರಣೆ ನ್ಯಾಯಾಲಯದ ಆದೇಶದಿಂದಾಗಿ ಆಪಾದಿತರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(1)ರನುಸಾರ ಅವರ ಮೇಲಿನ ಕ್ರಿಮಿನಲ್ ಮೊಕದ್ದಮೆಯಲ್ಲಿ ಕ್ರಿಮಿನಲ್ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಸರ್ಕಾರಿ ಸುತ್ತೋಲೆ ಸಂ:ಸಿಆಸುಇ 9 ಸೇಇವಿ 95 ದಿ:26.06.1996ರ ಅನುಸಾರ ಏಕೆ ಕ್ರಮ ಕೈಗೊಳ್ಳಬಾರದೆಂಬ ಬಗ್ಗೆ ಶ್ರೀ ಬಿ. ನಿಜಲಿಂಗಪ್ಪ, ಸಹಾಯಕ ಖಜಾನಾಧಿಕಾರಿ ಮೇಲೆ ಓದಲಾದ ಕ್ರಮಸಂಖ್ಯೆ(3)ರಂತೆ ಅವರಿಗೆ ದಿನಾಂಕ;26.10.2013ರಂದು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ಕಾರಣ ಕೇಳುವ ನೋಟೀಸಿಗೆ ಶ್ರೀ ಬಿ. ನಿಜಲಿಂಗಪ್ಪ, ಸಹಾಯಕ ಖಜಾನಾಧಿಕಾರಿ ರವರು ಮೇಲೆ ಓದಲಾದ ಕ್ರಮಸಂಖ್ಯೆ(4)ರಂತೆ ಉತ್ತರ ನೀಡಿ ತಮ್ಮ ವಿರುದ್ಧ ದಾಖಲಾಗಿದ್ದ ಲೋಕಾಯುಕ್ತ ಲಂಚ ಪ್ರಕರಣದಲ್ಲಿ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇವರು ವಿಶೇಷ ಪ್ರಕರಣ ಸಂಖ್ಯೆ:4/2009ರಲ್ಲಿ ದಿನಾಂಕ:03.07.2013ರಂದು ನೀಡಿದ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯ ಸಂಚಾರಿ ಪೀಠ ಧಾರವಾಡ ಇಲ್ಲಿ ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆಯನ್ನು ಪಡೆದಿದ್ದು ಸದರಿ ಮೇಲ್ಮನವಿ ಇತ್ಯರ್ಥವಾಗುವವರೆಗೂ ತಮಗೆ ಯಾವುದೇ ದಂಡನೆ ವಿಧಿಸುವುದು ನ್ಯಾಯ ಸಮ್ಮತವಲ್ಲವೆಂದು ಹಾಗೂ ಈ ವಿಷಯದಲ್ಲಿ ತಮ್ಮ ವಿರುದ್ಧ ಲೋಕಾಯುಕ್ತ ವಿಚಾರಣೆ ನಡೆಯುತ್ತಿದ್ದು, ವಿಚಾರಣೆ ಮುಗಿಯುವವರೆಗೂ ತಮ್ಮ ಮೇಲೆ ಯಾವುದೇ ಕ್ರಮವನ್ನು ಜರುಗಿಸುವಂತಿಲ್ಲವೆಂದು ತಿಳಿಸಿರುತ್ತಾರೆ.

ಈ ಪ್ರಕರಣವನ್ನು ಸರ್ಕಾರವು ಪರಿಶೀಲಿಸಿದೆ. ದಿ:26.06.1996ರ ಸರ್ಕಾರಿ ಸುತ್ತೋಲೆ ಸಂ:ಸಿಆಸುಇ 9ಸೇಇವಿ 95 ರನುಸಾರ ಅಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರೆ ವ್ಯವಹರಣೆ ಹೊಡಿದ್ದಾನೆ, ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಭನೆಯಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ ಸರ್ಕಾರಿ ನೌಕರರ ವಿರುದ್ಧ ಕ್ರಮವನ್ನು ಸ್ಥಗಿತಗೊಳಿಸುವಂತಿಲ್ಲ ಈ ಅಂಶಗಳ ಹಿನ್ನೆಲೆಯಲ್ಲಿ ಬಿ. ನಿಜಲಿಂಗಪ್ಪ, ಪತ್ರಾಂಕಿತ ಉಪ ಖಜಾನಾಧಿಕಾರಿ ಖಜಾನೆ ಇಲಾಖೆ ಅವರ ವಾದವನ್ನು ಒಪ್ಪದೇ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ಅವರನ್ನು ಸೇವೆಯಿಂದ ವಜಾಗೊಳಿಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 255 ಆಖಇ 2008, ಬೆಂಗಳೂರು, ದಿನಾಂಕ: 25.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳಿಂದಾಗಿ ಕರ್ನಾಟಕ ನಾಗರಿಕ ಸೇವಾ(ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(VIII) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಬಿ. ನಿಜಲಿಂಗಪ್ಪ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುತ್ತದೆ.

**PR. 575**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

## ಕೃಷಿ ಸಚಿವಾಲಯ

**ವಿಷಯ:** ಕೃಷಿಯಲ್ಲಿ ಡಿಪ್ಲೊಮಾ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿನ ಪ್ರವೇಶದಲ್ಲಿನ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳಿಗೆ ಶೇ. 40 ರಷ್ಟು ಮೀಸಲಿಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಎಹೆಚ್‌ಡಿ 63 ಎಯುಎಂ 2003, ದಿನಾಂಕ: 10–07–2003.

2) ಕುಲಸಚಿವರು ಕೃಷಿ ವಿಶ್ವವಿದ್ಯಾಲಯ ಬೆಂಗಳೂರು ರವರ ಪತ್ರ ದಿನಾಂಕ: 01–02–2014, ಸಂಖ್ಯೆ: ಕು.ಸ/ಆ–1/ಡಿಪ್ಲೊಮಾ(ಕೃಷಿ)/2013–14.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ. (1)ರ ದಿನಾಂಕ: 10–07–2003ರ ಆದೇಶದಲ್ಲಿ ಕೃಷಿ ವಿಶ್ವವಿದ್ಯಾಲಯಗಳ ಅಧಿನಿಯಮ, 2009ರ ಪ್ರಕರಣ (ಕಲಂ)–6(2)(1) ರನ್ವಯ ಸರ್ಕಾರವು ವಿಶ್ವವಿದ್ಯಾಲಯಗಳ ಪ್ರವೇಶಗಳಲ್ಲಿ ಮೀಸಲಾತಿಯನ್ನು ನಿಗದಿಪಡಿಸಲು ಅಧಿಕಾರವಿದ್ದು ಈ ಅಧಿಕಾರದನ್ವಯ ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿ ಕೃಷಿಕರ ಅಥವಾ ಅವರ ಮಕ್ಕಳಿಗಾಗಿ ಶೇ. 23.8 ರಷ್ಟು ಪ್ರವೇಶದಲ್ಲಿ ಮೀಸಲಾತಿಯನ್ನು ನಿಗದಿಪಡಿಸಲಾಗಿದೆ.

ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ: 14–02–2013–2014ರಂದು ವಿಧಾನ ಮಂಡಲದಲ್ಲಿ ಮಂಡಿಸಿದ ಆಯವ್ಯಯದಲ್ಲಿ (ಕಂಡಿಕೆ–34) ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಡಿಪ್ಲೊಮಾ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳ ಪ್ರವೇಶಕ್ಕೆ ಈಗಿರುವ ಮೀಸಲಾತಿ ಪ್ರಮಾಣವನ್ನು ಶೇ. 40ಕ್ಕೆ ಹೆಚ್ಚಿಸಲಾಗುವುದು ಎಂಬುದಾಗಿ ಘೋಷಿಸಿರುತ್ತಾರೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಕುಲಸಚಿವರು, ಕೃಷಿ ವಿಶ್ವವಿದ್ಯಾಲಯ ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಪತ್ರದಲ್ಲಿ ಕೃಷಿ ಪದವಿ ಮತ್ತು ಡಿಪ್ಲೊಮಾ ಕೋರ್ಸುಗಳಿಗೆ ಕೃಷಿ ಕುಟುಂಬದ ಹಿನ್ನೆಲೆಯಿಂದ ಬರುವ ವಿದ್ಯಾರ್ಥಿಗಳಿಗೆ ಹೆಚ್ಚಿನ ಅದ್ಯತೆ ನೀಡುವುದರಿಂದ, ರಾಜ್ಯದ ಕೃಷಿಕರಿಗೆ ಅನುಕೂಲಗಾಗುತ್ತದೆ ಎಂಬ ದೃಷ್ಟಿಯಿಂದ, ಕೃಷಿಕರ ಮಕ್ಕಳಿಗೆ ಮತ್ತು ಕೃಷಿ ಹಿನ್ನೆಲೆಯಿಂದ ಬರುವ ವಿದ್ಯಾರ್ಥಿಗಳಿಗೆ ಹೆಚ್ಚಿನ ಪ್ರಮಾಣದ ಸೀಟುಗಳನ್ನು ಮೀಸಲಿರಿಸಿದಲ್ಲಿ, ಅಂತಹ ವಿದ್ಯಾರ್ಥಿಗಳು ಕೃಷಿಗೆ ಸಂಬಂಧಪಟ್ಟ ಪದವಿ ಮತ್ತು ಡಿಪ್ಲೊಮಾ ಕೋರ್ಸುಗಳಲ್ಲಿ ಅಭ್ಯಾಸಮಾಡಿ ಹೆಚ್ಚಿನ ಜ್ಞಾನವನ್ನು ಸಂಪಾದಿಸಿ ಅದನ್ನು ಕೃಷಿ ಚಟುವಟಿಕೆಗಳಿಗೆ ತೊಡಗಿದ್ದಾರೆ ಎನ್ನುವ ದೃಷ್ಟಿಯಿಂದ ಈ ಮೀಸಲಾತಿಯನ್ನು ಶೇ. 23.8 ರಿಂದ ಹೆಚ್ಚಿಸಿ ಕೃಷಿ ಡಿಪ್ಲೊಮಾ ಕೋರ್ಸುಗಳಿಗೆ ವಿಸ್ತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃಇ 22 ಕೃವಿವಿ 2014, ಬೆಂಗಳೂರು, ದಿನಾಂಕ: 05.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಡಿ 63 ಎಯುಎಂ 2003, ದಿನಾಂಕ: 10–07–2003ರನ್ವಯ ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಬಿ.ಎಸ್ಸಿ (ಕೃಷಿ) ಹಾಗೂ ತತ್ಸಮಾನ ಪದವಿಗಳಲ್ಲಿ ರೈತರ ಹಾಗೂ ಕೃಷಿ ಕಾರ್ಮಿಕರ ಮಕ್ಕಳಿಗಾಗಿ ಪ್ರವೇಶದಲ್ಲಿ ಶೇ. 23.8 ರಷ್ಟು ನಿಗದಿಪಡಿಸಿರುವ ಮೀಸಲಾತಿಯನ್ನು ಶೇ. 40ಕ್ಕೆ ಹೆಚ್ಚಿಸಿದೆ ಹಾಗೂ ಈ ಹೆಚ್ಚಳದ ಮೀಸಲಾತಿಯನ್ನು 2 ವರ್ಷದ ಡಿಪ್ಲೊಮಾ (ಕೃಷಿ) ಕಾರ್ಯಕ್ರಮಗಳಿಗೂ ವಿಸ್ತರಿಸಲು ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಪ್ಪಣಿ ಸಂಖ್ಯೆ: ಆಇ 239 ವೆಚ್ಚ–4/2014, ದಿನಾಂಕ: 06–06–2014ರಲ್ಲಿ ನೀಡಿದ ಅಭಿಪ್ರಾಯ ಹಾಗೂ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

**PR. 576**
**SC. 25**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಂಜುನಾಥ ಪಾಟೀಲ್**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು),

ಕೃಷಿ ಇಲಾಖೆ.

## ತೋಟಗಾರಿಕೆ ಸಚಿವಾಲಯ

**ವಿಷಯ:** ಸರ್ಕಾರಿ ಉರ್ದು ಪ್ರೌಢಶಾಲೆ, ಸೂಲಿಬೆಲೆ, ಹೊಸಕೋಟೆ ತಾಲ್ಲೂಕು ಶಾಲೆಯನ್ನು ನಡೆಸಲು ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆ ಇಲ್ಲಿ ತಾತ್ಕಲಿಕವಾಗಿ ಸ್ಥಳಾವಕಾಶ ಕಲ್ಪಿಸುವ ಸಲುವಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಪತ್ರ ಸಂಖ್ಯೆ. ರೇನಿ/ಸ್ಥಿಆಶಾ/ಸೂಬೆ/ಪ್ರದಕಾ/17/2007–08, ದಿನಾಂಕ: 05–06–2014.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 05–06–2014ರ ಪತ್ರದಲ್ಲಿ ಸರ್ಕಾರಿ ಮಾದರಿ ಬಿತ್ತನೆ ಕೋಠಿಯಲ್ಲಿ ಈಗ ಪ್ರಥಮ ದರ್ಜೆ ಕಾಲೇಜು ಬಳಸದೇ ಇಟ್ಟುಕೊಂಡಿರುವ ಕೊಠಡಿಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಬಿತ್ತನೆ ಕೋಠಿ ಕೆಲಸಕ್ಕೆ ತೊಂದರೆಯಿಲ್ಲದೆ 2 ಕೊಠಡಿಗಳನ್ನು ನೀಡಬಹುದೆಂದು ರೇಷ್ಮೆ ಉಪ ನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ ಇವರು ಅಭಿಪ್ರಾಯ ನೀಡಿದ್ದು, ಮತ್ತು ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಪೂರ್ಣಗೊಂಡಿದ್ದು, ಕಾಲೇಜಿನವರು ಬಿತ್ತನೆ ಕೋಠಿಯ ಕೆಲವು ಕೊಠಡಿಗಳನ್ನು ಇನ್ನೂ ಖಾಲಿ ಮಾಡದೇ ತನ್ನ ಸುಪರ್ದಿಯಲ್ಲಿಟ್ಟುಕೊಂಡಿರುತ್ತಾರೆ. ಕಾಲೇಜು

ಪುನರಾರಂಭವಾದಾಗ ಖಾಲಿ ಮಾಡುವುದಾಗಿ ಪ್ರಾಂಶುಪಾಲರು ಪ್ರಥಮ ದರ್ಜೆ ಕಾಲೇಜು ಇವರು ವರದಿ ಮಾಡಿದ್ದು, ಕಟ್ಟಡ ತೆರವು ಗೊಳಿಸಿದ ನಂತರ ಇನ್ನೆರಡು ಕೊಠಡಿಗಳನ್ನು ಕೊಡಬಹುದೆಂದು ರೇಷ್ಮೆ ಉಪ ನಿರ್ದೇಶಕರು ತಿಳಿಸಿರುವ ಮೇರೆಗೆ ಸರ್ಕಾರಿ ಉರ್ದು ಪ್ರೌಢ ಶಾಲೆ. ಸೂಲಿಬೆಲೆಗೆ ಸರ್ಕಾರಿ ರೇಷ್ಮೆ ಮಾದರಿ ಬಿತ್ತನೆ ಕೋಠಿಯ ಕಟ್ಟಡದ 3ನೇ ಮಹಡಿಯಲ್ಲಿರುವ 2 ಕೊಠಡಿಗಳನ್ನು ಮತ್ತು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನವರು ಕಟ್ಟಡ ತೆರವುಗೊಳಿಸಿದ ನಂತರ 2 ಕೊಠಡಿಗಳನ್ನು ಒಟ್ಟು 04 ಕೊಠಡಿಗಳನ್ನು ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ತಾತ್ಕಾಲಿಕವಾಗಿ ಹಾಗೂ ಉಚಿತವಾಗಿ ನೀಡಲು ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಗೆ ಸೇರಿದ ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆಯ ಕಟ್ಟಡದ 3ನೇ ಮಹಡಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಇವರು ಬಳಸದೇ ಇರುವ 2 ಕೊಠಡಿಗಳನ್ನು ಸರ್ಕಾರಿ ಉರ್ದು ಪ್ರೌಢಶಾಲೆ, ಸೂಲಿಬೆಲೆ ಇಲ್ಲಿನ ಶಾಲೆಯನ್ನು ನಡೆಸಲು ತಾತ್ಕಲಿಕವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಲೋಕೋಪಯೋಗಿ ಇಲಾಖೆಯು ನಿಗಧಿಪಡಿಸುವ ಬಾಡಿಗೆ ಆಧಾರದ ಮೇಲೆ ನೀಡಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 15 ರೇಯೋವಿ 2014, ಬೆಂಗಳೂರು, ದಿನಾಂಕ: 27.06.2014**

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಗೆ ಸೇರಿದ ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆಯ ಕಟ್ಟಡದ 3ನೇ ಮಹಡಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಇವರು ಬಳಸದೇ ಇರುವ 2 ಕೊಠಡಿಗಳನ್ನು ಸರ್ಕಾರಿ ಉರ್ದು ಪ್ರೌಢಶಾಲೆ, ಸೂಲಿಬೆಲೆ ಇಲ್ಲಿನ ಶಾಲೆಯನ್ನು ನಡೆಸಲು ತಾತ್ಕಲಿಕವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಲೋಕೋಪಯೋಗಿ ಇಲಾಖೆಯು ನಿಗಧಿಪಡಿಸುವ ಬಾಡಿಗೆ ಆಧಾರದ ಮೇಲೆ ನೀಡಲು ಸರ್ಕಾರವು ಆದೇಶಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಉಮಾಪತಿ,**

ಪೀಠಾಧಿಕಾರಿ(ಪ್ರಭಾರ),

**PR. 579**

ತೋಟಗಾರಿಕೆ ಇಲಾಖೆ(ರೇಷ್ಮೆ).

## FOREST, ECOLOGY AND ENVIRONMENT SECRETARIAT

### ADDENDUM

**No. FEE 46 EPC 2013, Bangalore, dated: 13.12.2013.**

The following Table shall be inserted after Table V in the operative portion of the Government Order No. FEE 46 EPC 2013 dated 10.05.2013.

**TABLE (VI)**

Industrial Estates and Townships & Area Development Projects:

| SL NO. | Activity | One Time Processing Fee (in Rs) |
|---|---|---|
| 1. | Industrial Areas covered under Sl. No. 7(c) of the Schedule of EIA Notification, 2006 | 2,00,000 |
| 2. | Township and Area Development Projects covered under Sl. No. 8(b) of the Schedule of EIA Notification, 2006 | 2,00,000 |

By Order and in the name of the Governor of Karnataka,

**P.R.580**

**G.H. Anasuyamma**

**S.C. 200**

Under Secretary to Government,

Forest, Eclolgy and Environment Department.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಚಾಮರಾಜನಗರ ಜಿಲ್ಲೆಯಲ್ಲಿ ಕೇಂದ್ರ ಸರ್ಕಾರದ ಕೇಂದ್ರಿಯ ವಿದ್ಯಾಲಯ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತ್ತಕೋತ್ತರ ಉಪ ಕೇಂದ್ರಗಳನ್ನು ಸ್ಥಾಪಿಸಲು ಚಾಮರಾಜನಗರ ತಾಲ್ಲೂಕು. ಕಸಬಾ ಹೋಬಳಿ. ಉತ್ತವಳ್ಳಿ ಗ್ರಾಮದ ಸರ್ವೆ ನಂ. 117ರಲ್ಲಿ 10 ಎಕರೆ ಮತ್ತು ಕಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118 ರಲ್ಲಿ 54.03 ಎಕರೆ ಪ್ರದೇಶವನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಚಾಮರಾಜನಗರ ಅವರ ಪತ್ರ ಸಂಖ್ಯೆ ಎಲ್ಎನ್‌ಡಿ/ಸಿಆರ್/50/2014–15 ದಿನಾಂಕ:21/06/2014.
2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 185 ಎಫ್ಎಫ್ 2011, ದಿನಾಂಕ: 15/05/2014.

ಪ್ರಸ್ತಾವನೆ:

ಮೇಲೆ ಓದಲಾದ ಉಲ್ಲೇಖ (1) ರ ಪತ್ರದಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿ ಕೇಂದ್ರ ಸರ್ಕಾರದ ಕೇಂದ್ರೀಯ ವಿಧ್ಯಾಲಯ ಸ್ಥಾಪನೆ ಹಾಗೂ ಮೈಸೂರು ವಿಶ್ವವಿಧ್ಯಾನಿಲಯದ ಸ್ನಾತ್ತಕೋತ್ರರ ಉಪ ಕೇಂದ್ರವನ್ನು ಸ್ಥಾಪಿಸುವುದು ಜಿಲ್ಲೆಯ ಶೈಕ್ಷಣಿಕ ಅಭಿವೃದ್ಧಿ ದೃಷ್ಟಿಯಿಂದ ಅತಿ ಮುಖ್ಯವಾಗಿದ್ದು. ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಉತ್ತವಳ್ಳಿ ಗ್ರಾಮದ ಸರ್ವೆ ನಂ. 117 ರಲ್ಲಿ 10 ಎಕರೆ ಮತ್ತು ಕಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118 ರಲ್ಲಿ 54.03 ಎಕರೆ ಒಟ್ಟು 64.03 ಎಕರೆ/ಗುಂಟೆ ಪ್ರದೇಶವನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಹಸ್ತಾಂತರಿಸುವ ಬಗ್ಗೆ ಗುರುತಿಸಲಾಗಿದ್ದು. ಸದರಿ ಜಮೀನು ಕಲ್ಲು ಮಿಶ್ರಿತ ಗುಡ್ಡ ಪ್ರದೇಶದಿಂದ ಕೂಡಿದ್ದು. ಕುರುಗಲ್ಲು, ಬೇವು, ಕಗ್ಗಾಲಿ, ಕಟ್ಟೆ ಇತ್ಯಾದಿ ಕುರುಚಲು ಗಿಡಗಳು ಇರುತ್ತವೆ. ಸರ್ಕಾರದ ಆದೇಶದಂತೆ 1 ಹೆಕ್ಟೇರ್ ಪ್ರದೇಶದಲ್ಲಿ ಸ್ವಾಭಾವಿಕವಾಗಿ ಬೆಳೆದ 30 ಸೆಂ.ಮೀ. ಹಾಗೂ ಅದಕ್ಕೂ ಅಧಿಕ ಸುತ್ತಳತೆ ಒಳಗೆ ಬರುವ ನೀಲಗಿರಿ ಮತ್ತು ಅಕೇಷಿಯ ಮರಗಳು ಇರುವುದು ಕಂಡುಬಂದಿರುತ್ತದೆ. ಇಲ್ಲಿ ಗುರುತಿಸಿರುವ ಪ್ರದೇಶದಲ್ಲಿ ಲಭ್ಯವಿರುವ ಮರಗಳು ಸರ್ಕಾರಿ ಆದೇಶದಲ್ಲಿ ತಿಳಿಸಿರುವಂತೆ. ಅರಣ್ಯ ಎಂದು ಪರಿಗಣಿಸಲು ನಿಗದಿಪಡಿಸಿರುವ ಮಾನದಂಡಕ್ಕಿಂತ ಕಡಿಮೆ ಇರುತ್ತದೆ ಎಂದು ತಿಳಿಸಿದ್ದಾರೆ.

ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ 202/1995 ಶ್ರೀ ಗೋದವರ್ಮನ್ ತಿರುಮಲಪಾದ್ ವಿರುದ್ಧ ರಾಜ್ಯ ಸರ್ಕಾರಗಳು ಪ್ರಕರಣಗಳನ್ನು ದಿನಾಂಕ 12/12/1996 ರಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಲ್ಲಿ ಅರಣ್ಯ ಮತ್ತು ಅರಣ್ಯ ಭೂಮಿ ಎಂಬುದರ ಬಗ್ಗೆ ಪದಕೋಶದಲ್ಲಿನ ಅರ್ಥದಲ್ಲಿ (dictionary meaning) ವ್ಯಾಖ್ಯಾನಿಸಿದ್ದು ಅದರಂತೆ ಸರ್ಕಾರಿ ಭೂಮಿ ಹಾಗೂ ಕಂದಾಯ ಇಲಾಖೆಯಿಂದ ಅರಣ್ಯ ಇಲಾಖೆಗೆ ಲ್ಯಾಂಡ್ ಬ್ಯಾಂಕ್‌ಗಾಗಿ ವರ್ಗಾಯಿಸಿರುವ ಸಿ ಮತ್ತು ಡಿ ವರ್ಗದ ಜಮೀನುಗಳನ್ನು ಪುನರ್ರಚಿತ ತಜ್ಞರ–1 ಸಮಿತಿಯು ಗ್ರಾಮವಾರು, ಸರ್ವೆ ನಂಬರ್‌ವಾರು ಪರಿಶೀಲಿಸಿ, ಅರಣ್ಯ ಲಕ್ಷಣಗಳುಳ್ಳ ಸರ್ಕಾರಿ ಭೂಮಿ ಮತ್ತು ಕಂದಾಯ ಇಲಾಖೆಯಿಂದ ವರ್ಗವಾಗಿರುವ ಸಿ ಮತ್ತು ಡಿ ವರ್ಗದ ಜಮೀನುಗಳಲ್ಲಿ ಅರಣ್ಯ ಲಕ್ಷಣಗಳುಳ್ಳ ಮರಗಳಿರುವ ಜಮೀನನ್ನು ಮತ್ತು ಅರಣ್ಯ ಲಕ್ಷಣಗಳನ್ನು ಹೊಂದಿರದ ಮರಗಳೇ ಇಲ್ಲದ ಜಮೀನನ್ನು ಸೇರಿಸಿ ಡೀಮ್ಡ್ ಫಾರೆಸ್ಟ್ ಎಂದು ಗುರುತಿಸಿ, ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಲಾಗಿದೆ. ಇದರಿಂದಾಗಿ, ಶಿಕ್ಷಣ, ಆರೋಗ್ಯ, ಕುಡಿಯುವ ನೀರಿನ ಸರ್ಕಾರದ ಯೋಜನೆಗಳ ಅನುಷ್ಠಾನಕ್ಕಾಗಿ, ಸರ್ಕಾರಿ ಭೂಮಿ ಇಲ್ಲದಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ, ಪುನರ್ ರಚಿತ ತಜ್ಞರು ಸಮಿತಿ–1 ಗುರುತಿಸಿರುವ ಡೀಮ್ಡ್ ಫಾರೆಸ್ಟ್ ಬಗ್ಗೆ 1 ಹೆಕ್ಟೇರ್ ಪ್ರದೇಶದಲ್ಲಿ ಸ್ವಾಭಾವಿಕವಾಗಿ ಬೆಳೆದ 30 ಸೆಂ.ಮೀ, ಹಾಗೂ ಅದಕ್ಕೂ ಅಧಿಕ ಸುತ್ತಳತೆ ಇರುವ 50 ಅಥವಾ ಅದಕ್ಕಿಂತ ಹೆಚ್ಚಿನ ಗಿಡಗಳಿದ್ದಲ್ಲಿ, ಅಥವಾ ನೆಡುತೋಪು ಆಗಿದ್ದಲ್ಲಿ, 1 ಹೆಕ್ಟೇರ್ ಪ್ರದೇಶದಲ್ಲಿ 30 ಸೆಂ.ಮೀ. ಹಾಗೂ ಅಧಿಕ ಸುತ್ತಳತೆಯುಳ್ಳ 100 ಅಥವಾ ಅದಕ್ಕಿಂತಲೂ ಹೆಚ್ಚು ಗಿಡಗಳು ಇರುವ ಪ್ರದೇಶವನ್ನು ಅರಣ್ಯ ಪ್ರದೇಶವೆಂದು ಗುರುತಿಸಲು ಮಾನದಂಡವನ್ನು ರೂಪಿಸಿ ಸ್ಥಳ ಪರಿಶೀಲನೆ ಮಾಡಿ ವರದಿ ಸಲ್ಲಿಸಲು ಉಲ್ಲೇಖ (2) ರ ಸರ್ಕಾರಿ ಆದೇಶದಲ್ಲಿ ಜಿಲ್ಲಾ ವಿಭಾಗೀಯ ಹಾಗೂ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಿ 6 ತಿಂಗಳೊಳಗಾಗಿ ವರದಿ ಸಲ್ಲಿಸಲು ಆದೇಶಿಸಲಾಗಿದೆ.

ಚಾಮರಾಜನಗರ ಜಿಲ್ಲೆಯಲ್ಲಿ ಕೇಂದ್ರ ಸರ್ಕಾರದ ಕೇಂದ್ರೀಯ ವಿದ್ಯಾಲಯ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತ್ತಕೋತ್ತರ ಉಪ ಕೇಂದ್ರಗಳನ್ನು ಸ್ಥಾಪಿಸಲು ಚಾಮರಾಜನಗರ ತಾಲ್ಲೂಕು. ಕಸಬಾ ಹೋಬಳಿ. ಉತ್ತವಳ್ಳಿ ಗ್ರಾಮದ ಸರ್ವೆ ನಂ. 117ರಲ್ಲಿ 10 ಎಕರೆ ಮತ್ತು ಕಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118ರಲ್ಲಿ 54.03 ಎಕರೆ ಪ್ರದೇಶವನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಉಲ್ಲೇಖ (2) ರ ಆದೇಶದಲ್ಲಿನ ಮಾನದಂಡವನ್ನು ಅನುಸರಿಸಿ, ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಅವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮಿತಿಯು ದಿನಾಂಕ: 16/06/2014 ರಂದು ನಡೆದ ಸಭೆಯಲ್ಲಿ ಸರ್ಕಾರ ರೂಪಿಸಿರುವ ಮಾನಂದಂಡಗಳನ್ನು ಅನುಸರಿಸಿ ಸದರಿ ಸಭೆಯ ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಉತ್ತವಳ್ಳಿ ಗ್ರಾಮದ ಸರ್ವೆ ನಂ. 117 ರಲ್ಲಿ 10 ಎಕರೆ ಮತ್ತು ಕಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118 ರಲ್ಲಿ 54.03 ಎಕರೆ ಪ್ರದೇಶವನ್ನು ಡೀಮ್ಡ್ ಫಾರೆಸ್ಟ್ ಎಂದು ಪರಿಗಣಿಸಲು ನಿಗದಿಪಡಿಸಿರುವ ಮಾನದಂಡಕ್ಕೆ ಒಳಪಡದೆ ಇರುವುದರಿಂದ, ಸದರಿ ಅರಣ್ಯ ಪ್ರದೇಶವನ್ನು ಚಾಮರಾಜನಗರ ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಕೇಂದ್ರೀಯ ವಿದ್ಯಾಲಯ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತ್ತಕೋತ್ತರ ಉಪಕೇಂದ್ರ ಸ್ಥಾಪಿಸಲು ಶೈಕ್ಷಣಿಕ ಉದ್ದೇಶಕ್ಕಾಗಿ ಜಿಲ್ಲಾ ಮಟ್ಟದ ಸಮಿತಿಯು ತೀರ್ಮಾನ ತೆಗೆದುಕೊಂಡಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 75 ಎಫ್‌ಎಲ್‌ಎಲ್ 2014, ಬೆಂಗಳೂರು, ದಿನಾಂಕ: 24.07.2014**

ಪ್ರಸ್ತಾನವೆಯಲ್ಲಿ ವಿವರಿಸಿರುವ ಎಲ್ಲಾ ಕಾರಣಗಳಿಂದ, ಚಾಮರಾಜನಗರ ತಾಲ್ಲೂಕು, ಕಸಬಾ ಹೋಬಳಿ, ಉತ್ತವಳ್ಳಿ ಗ್ರಾಮದ ಸರ್ವೆ ನಂ. 117 ರಲ್ಲಿ 10 ಎಕರೆ ಮತ್ತು ಕಲ್ಲಂಬಳ್ಳಿ ಗ್ರಾಮದ ಸರ್ವೆ ನಂ. 118 ರಲ್ಲಿ 54.03 ಎಕರೆ ಪ್ರದೇಶವನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಚಾಮರಾಜನಗರ ಜಿಲ್ಲೆಯಲ್ಲಿ ಕೇಂದ್ರ ಸರ್ಕಾರದ ಕೇಂದ್ರೀಯ ವಿದ್ಯಾಲಯ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತ್ತಕೋತ್ತರ ಉಪ ಕೇಂದ್ರವನ್ನು ಸ್ಥಾಪಿಸಲು ಈ ಕೆಳಕಾಣಿಸಿರುವ ಷರತ್ತುಗಳೊಂದಿಗೆ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರಿಗೆ ಹಸ್ತಾಂತರಿಸಲು ಸರ್ಕಾರ ಅನುಮೋದನೆ ನೀಡಿದೆ.

1. ಈ ಭೂಮಿಯನ್ನು ಯಾವುದೇ ವಾಣಿಜ್ಯ ಉದ್ದೇಶಗಳಿಗೆ ಉಪಯೋಗಿಸದಿರಲು ಸೂಚಿಸಿದೆ.
2. ಈ ಭೂಮಿಯನ್ನು ಉದ್ದೇಶಿತ ಕಾರ್ಯಕ್ರಮಕ್ಕಲ್ಲದೆ ಅನ್ಯ ಉದ್ದೇಶಗಳಿಗೆ ಉಪಯೋಗಿಸಿದ್ದಲ್ಲಿ/ಉಪಯೋಗಿಸಿರುವುದು ಕಂಡುಬಂದಲ್ಲಿ ಸದರಿ ಭೂಮಿಯನ್ನು ಕೂಡಲೇ ವಾಪಸ್ಸು ಪಡೆಯಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಶಾರದ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR. 584**

**S.C. 100**

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯಲ್ಲಿ ಜಮಾಬಂದಿ ಕಾರ್ಯವಿಧಿ ವಿಧಾನಗಳನ್ನು ನೌಕರರು/ಅಧಿಕಾರಿಗಳು ಅನುಸರಿಸುವ ಬಗ್ಗೆ ಪರಿಷ್ಕೃತ ಮಾರ್ಗಸೂಚಿಗಳು.

**ಪ್ರಸ್ತಾವನೆ:**

ಜಮಾಬಂದಿ ಪದ್ಧತಿಯು ವಾರ್ಷಿಕ ಕಂದಾಯ ಲೆಕ್ಕಪರಿಶೋಧನೆಯ ಒಂದು ವಿಧಾನವಾಗಿದ್ದು, ಬ್ರಿಟಿಷ್ ಕಾಲದಲ್ಲಿ ಭೂ ಕಂದಾಯವು ಆದಾಯದ ಒಂದು ಪ್ರಮುಖ ಮೂಲವಾದುದರಿಂದ ಸಂಪನ್ಮೂಲ ಕ್ರೋಢೀಕರಣ ಕಾರ್ಯಕ್ರಮವಾಗಿ ಪರಿಗಣಿಸಲಾಗಿತ್ತು. ಭೂ ಕಂದಾಯದಲ್ಲಿನ ಹೆಚ್ಚಳ ಅಥವಾ ಇಳಿಕೆಯ ಆಧಾರದ ಮೇಲೆ ರೈತರ ಸುಸ್ಥಿತಿ ಅಥವಾ ಬವಣೆ ತಿಳಿದುಬರುವ ಕಾರಣ ರೈತರು ಮತ್ತು ಸರ್ಕಾರಕ್ಕೆ ಮುಖ್ಯವಾಗಿತ್ತು. ಆದಾಗ್ಯೂ ಸ್ವಾತಂತ್ರ್ಯದ ನಂತರ, ಸರ್ಕಾರವು ಭೂ ಕಂದಾಯವನ್ನು ಒಂದು ಸೀಮಿತ ಮೊತ್ತಕ್ಕೆ ಕಡಿತಗೊಳಿಸಿದ ಕಾರಣ ಕ್ರಮೇಣ ಜಮಾಬಂದಿಯ ಕಾರ್ಯವಿಧಾನಕ್ಕೆ ನೀಡಲಾಗಿದ್ದ ಪ್ರಾಮುಖ್ಯತೆಯು ಕಡಿಮೆಯಾಗುತ್ತಾ ಬಂದಿರುತ್ತದೆ.

ಜಮಾಬಂದಿ ಕಾರ್ಯವಿಧಾನವು ಕೇವಲ ಕಂದಾಯ ಲೆಕ್ಕಪರಿಶೋಧನೆ ಅಂಶಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಈ ಕಾರ್ಯವಿಧಾನದಿಂದಾಗಿ ಇಲಾಖೆಯು ಎಲ್ಲಾ ನಿಯಮಿತ ಮತ್ತು ಪ್ರಮುಖ ಕಂದಾಯ ಕಾರ್ಯಗಳಾದ ಬೆಳೆ ಇಂಡೀಕರಣ, ಜಮೀನು ಮಾಲೀಕನು ಮೃತನಾದಾಗ ತನ್ನಿಂದತಾನೇ ಖಾತೆ ಇಂಡೀಕರಣ, ಜನನ ಮತ್ತು ಮರಣ ನೊಂದಣಿ, ಸರ್ಕಾರಿ ಜಮೀನುಗಳ ಗುರುತಿಸುವಿಕೆ ಮತ್ತು ಅವುಗಳ ರಕ್ಷಣೆ, ಷರತ್ತುಗಳ ಆಧಾರದ ಮೇಲೆ ಕಾಲಕಾಲಕ್ಕೆ ಭೂ ಮಂಜೂರಾತಿ, ಗ್ರಾಮ ಮಟ್ಟದಲ್ಲಿ ಗ್ರಾಮಲೆಕ್ಕಿಗರು ನಿರ್ವಹಿಸುವ ಎಲ್ಲಾ ದಾಖಲೆಗಳ ಅಡ್ಡಪರಿಶೀಲನೆ ಮತ್ತು ಗ್ರಾಮ ಮಟ್ಟದಲ್ಲಿ ರೈತರು ವ್ಯಕ್ತಪಡಿಸುವ ಕುಂದುಕೊರತೆಗಳನ್ನು ಆಲಿಸಿ. ಅವಕ್ಕೆ ಸೂಕ್ತ ಪರಿಹಾರ ನೀಡುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗುತ್ತಿತ್ತು.

ಬಹಳಷ್ಟು ವರ್ಷಗಳಿಂದ ಜಮಾಬಂದಿ ಕಾರ್ಯವಿಧಾನವು ಅಪ್ರಸ್ತುತಗೊಂಡಿದ್ದು, ಭೂ ಕಂದಾಯವನ್ನು ಪ್ರತಿ ವರ್ಷ ಒಂದು ನಿರ್ದಿಷ್ಟ ಹೆಚ್ಚಳದ ಆಧಾರದ ಮೇಲೆ ಏರಿಸಲಾಗುತ್ತಿದೆ. ಇದರಿಂದಾಗಿ ಆಕಾರಬಂದ್ ಮತ್ತು ಆರ್.ಟಿ.ಸಿ. ಡಾಟಾ ನಡುವೆ ಸಂಪರ್ಕ ಇಲ್ಲದಂತಾಗುತ್ತಿದೆ. ಜಮಾಬಂದಿ ಬಗ್ಗೆ ರೈತರಿಗೆ ಮುಂಗಡವಾಗಿ ತಿಳಿಸುವ ಕ್ರಮವು ನಿಧಾನವಾಗಿ ಮಾಸಿಸುತ್ತಿರುವುದರಿಂದ ರೈತರು ತಮ್ಮ ಕುಂದುಕೊರತೆಗಳ ಬಗ್ಗೆ ಧ್ವನಿ ಎತ್ತಲು ಮತ್ತು ವಿವಿಧ ದಾಖಲಾತಿಗಳಲ್ಲಿನ ವ್ಯತ್ಯಾಸದ ಬಗ್ಗೆ ತಿಳಿಸಲು ವೇದಿಕೆ ಇಲ್ಲದಂತಾಗುತ್ತಿದೆ. ಇಂದು ಜಮಾಬಂದಿ ಎನ್ನುವುದು ವಿವಿಧ ರಿಜಿಸ್ಟರ್‌ಗಳಿಗೆ ಕೇವಲ ಸಹಿ ಮಾಡುವ ಒಂದು ಯಾಂತ್ರಿಕ ಕಾರ್ಯವಿಧಾನವಾಗಿದೆ.

ಜಮಾಬಂದಿ ಕಾರ್ಯವಿಧಾನವು ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೊಳಗಾಗಿದ್ದು, ಬಹಳಷ್ಟು ಸಮಯದಿಂದ ಕಂದಾಯ ದಾಖಲೆಗಳ ನಿಖರತೆಯು ತೀವ್ರ ತರಹದ ಟೀಕೆಗೆ ಒಳಪಟ್ಟಿದೆ. ಇಂದು ಇಲಾಖೆಯಿಂದ ನಿರ್ವಹಿಸಲ್ಪಟ್ಟ ಬಹಳಷ್ಟು ದಾಖಲೆಗಳು ಒಂದಕ್ಕೊಂದು ತಾಳೆ ಆಗುತ್ತಿಲ್ಲ. ದಾಖಲಾತಿಗಳ ಅಸಮರ್ಪಕತೆಯ ಲಾಭವನ್ನು ಬಳಸಿಕೊಂಡು, ಖಾಸಗಿಯವರು ಸರ್ಕಾರಿ ಭೂಮಿಯನ್ನು ಕೈವಶ ಪಡಿಸಿಕೊಳ್ಳುವ ಸನ್ನಿವೇಶ ಸೃಷ್ಟಿಯಾಗಿದೆ. ಆರ್.ಟಿ.ಸಿ ಯಲ್ಲಿನ ಈ ತಪ್ಪುಗಳಿಂದಾಗಿ ರೈತರು ಪಹಣಿಗಳನ್ನು ಬ್ಯಾಂಕಿಗೆ ನೀಡಿ ಬೆಳೆ ಸಾಲ ಪಡೆಯುವುದಕ್ಕಾಗಲೀ ಅಥವಾ ತಮ್ಮ ಜಮೀನಿನ ವರ್ಗಾವಣೆ ಮಾಡುವುದಕ್ಕಾಗಲೀ ವಿಳಂಬವಾಗಿ ಸಂಕಷ್ಟಕ್ಕೀಡಾಗುವರು ಮತ್ತು ಇಲಾಖೆಯ ಕಾರ್ಯವೈಖರಿ ಬಗ್ಗೆ ತುಂಬಾ ಟೀಕೆ-ಟಿಪ್ಪಣಿಗಳು ವ್ಯಕ್ತವಾಗುತ್ತಿವೆ.

ಈ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯು ಕಂದಾಯ ದಾಖಲೆಗಳನ್ನು ಅವಶ್ಯವಿದ್ದೆಡೆ ತಿದ್ದುಪಡಿ ಮಾಡಿ ಕಾಲ ಕಾಲಕ್ಕೆ ಪರಿಷ್ಕರಿಸುವ ಮೂಲಕ ಬಹುತೇಕವಾಗಿ ರೈತರ ಸಮಸ್ಯೆಗಳಿಗೆ ಸೂಕ್ತವಾಗಿ ಸ್ಪಂದಿಸಲು ಈ ಜಮಾಬಂದಿಯ ವ್ಯವಸ್ಥೆಯನ್ನು ಪುನರ್ ಪರಿಷ್ಕರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 41 ಎಲ್‌ಜಿಪಿ 2014 ಬೆಂಗಳೂರು, ದಿನಾಂಕ:13.03.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹುಜೂರ್ ಜಮಾಬಂಧಿ ಹಾಗೂ ದಿಟ್ಟಂ ಜಮಾಬಂದಿಗೆ ಸಂಬಂಧಿಸಿದಂತೆ ಕಂದಾಯ ಇಲಾಖೆಯ ಅಧಿಕಾರಿ/ನೌಕರರು ಅನುಸರಿಸಬೇಕಾದ ವಿಧಿವಿಧಾನಗಳು ಈ ಕೆಳಕಂಡಂತೆ ನಿಗದಿಪಡಿಸಿ ಆದೇಶಿಸಿದೆ.

**ಅ. ಹುಜೂರ್ ಜಮಾಬಂಧಿ**

ಪ್ರತಿ ವರ್ಷ ಡಿಸೆಂಬರ್ ಮಾಹೆಯ ಅಂತ್ಯದೊಳಗೆ ಆಯಾ ಜಿಲ್ಲೆಯ ಜಿಲ್ಲಾಧಿಕಾರಿ ಅಥವಾ ಉಪ ವಿಭಾಗಧಿಕಾರಿಗಳು ಹುಜೂರು ಜಮಾಬಂದಿ ನಡೆಸುವರು. ಜಿಲ್ಲಾಧಿಕಾರಿ/ಉಪವಿಭಾಗಧಿಕಾರಿಗಳ ಕಚೇರಿಯ ಒಂದು ತಂಡವು, ಕೆಲವು ದಿನಗಳ ಮುಂಚಿತವಾಗಿ ತಾಲ್ಲೂಕು ಕಚೇರಿಗೆ ಹೋಗಿ ದಾಖಲಾತಿಗಳನ್ನು ಪರಿಶೀಲಿಸಿ ಒಂದು ನಿರ್ದಿಷ್ಟ ನಮೂನೆಗಳಲ್ಲಿ ಮಾಹಿತಿ ದಾಖಲಿಸುವರು, ನಂತರ ಜಮಾಬಂದಿ ನಡೆಸುವ ಅಧಿಕಾರಿಗಳು ಸದರಿ ದಾಖಲಾತಿಗಳನ್ನು ಅಧಿಕೃತವಾಗಿ ಪರಿಶೀಲಿಸಿ, ಹಿಂದಿನ ವರ್ಷದ ಲೆಕ್ಕಗಳನ್ನು ದೃಢೀಕರಿಸುವ ಹಾಗೂ ಪ್ರಸಕ್ತ ಸಾಲಿನ ಕಂದಾಯ ನಿರ್ಧರಣೆಯನ್ನು ಮಾಡಿ, ಜಮಾಬಂದಿ ನಡೆಸಿದ 15 ದಿನಗಳೊಳಗೆ ಜಮಾಬಂದಿ ಅಧಿಕಾರಿಗಳು ಲೆಕ್ಕ ವಿವರಗಳನ್ನು ಅಧಿಕೃತವಾಗಿ ಸರ್ಕಾರಕ್ಕೆ ಸಲ್ಲಿಸಬೇಕಾಗುತ್ತದೆ.

**ಆ. ದಿಟ್ಟಂ ಜಮಾಬಂಧಿ**

ಈ ಜಮಾಬಂದಿಯನ್ನು ತಾಲ್ಲೂಕು ತಹಶೀಲ್ದಾರರು ನಡೆಸುವರು, ಎಲ್ಲಾ ವೃತ್ತ ಗ್ರಾಮಲೆಕ್ಕಿಗರ ಆ ವರ್ಷದಲ್ಲಿನ ಭೂ ಕಂದಾಯ ಬೇಡಿಕೆ, ವಸೂಲಿ ಹಾಗೂ ಬಾಕಿ ವಿವರಗಳ ಪರಿಶೀಲನೆ ಮತ್ತು ಇನ್ನಿತರ ದಾಖಲಾತಿಗಳ ಪ್ರಾಥಮಿಕ ಪರಿಶೀಲನೆಯನ್ನು ತಹಶೀಲ್ದಾರರು ನಡೆಸಿ ರಿಜಿಸ್ಟರ್‌ಗಳಲ್ಲಿ ದೃಢೀಕರಿಸುವರು. ತಾಲ್ಲೂಕು ಕಚೇರಿಯ ತಂಡವು ಹೋಬಳಿ/ವೃತ್ತ ಗ್ರಾಮಲೆಕ್ಕಾಧಿಕಾರಿಗಳ ಕಚೇರಿಗೆ ಮುಂಗಡವಾಗಿ ಹೋಗಿ ಗ್ರಾಮಲೆಕ್ಕಿಗರು ನಿರ್ವಹಿಸುವ ರಿಜಿಸ್ಟರ್‌ಗಳನ್ನು ಪರಿಶೀಲಿಸಿ ಟಿಪ್ಪಣಿ ತಯಾರಿಸುವರು. ದಿಟ್ಟಂ ಜಮಾಬಂದಿಯು, ಹುಜೂರು ಜಮಾಬಂದಿಯು ನಡೆಯುವ ದಿನಾಂಕಕ್ಕೆ ಕನಿಷ್ಠ ಒಂದು ತಿಂಗಳು ಮುಂಚಿತವಾಗಿ ನಡೆಯುವುದು. ದಿಟ್ಟಂ ಜಮಾಬಂದಿಯಲ್ಲಿ ಈ ಕೆಳಕಂಡ ದಾಖಲಾತಿಗಳು ಪರಿಶೀಲನೆಗೆ ಒಳಪಟ್ಟಿರುತ್ತದೆ.

| ರಶೀದಿ ಪುಸ್ತಕ | ಖಿರ್ದಿ ಪುಸ್ತಕ | ಕಮ್ಮಿ–ಜಾಸ್ತಿ ಘೋಷ್ವಾರೆ |
|---|---|---|
| ತಾಲ್ಲೂಕು ಭೂ ಕಂದಾಯ ದಿನಪುಸ್ತಕ | ತಾಲ್ಲೂಕು ಕಂದಾಯ ನಿರ್ಧರಣೆ ಲೆಡ್ಜರ್ | ಬೇಡಿಕೆ, ವಸೂಲಿ, ಉಳಿಕೆ ವಹಿ (ಡಿ.ಸಿ.ಬಿ ರಿಜಿಸ್ಟರ್) |
| ಕುಳವಾರು ಬಾಕಿ ಪಟ್ಟಿ | ಇತರೆ ಕಂದಾಯ ಬಾಕಿ ರಿಜಿಸ್ಟರ್ | |

ದಿಟ್ಟಂ ಜಮಾಬಂದಿ ಸಂದರ್ಭದಲ್ಲಿ ಪ್ರಸಕ್ತ ಕಂದಾಯ ವರ್ಷದ ಲೆಕ್ಕಗಳನ್ನು ಪೂರ್ಣಗೊಳಿಸುವ ನಿಟ್ಟಿನಲ್ಲಿ ಕೆಳಕಂಡ ರಿಜಿಸ್ಟರ್‌ಗಳನ್ನು ಪರಿಶೀಲಿಸಲಾಗುವುದು:

| ಪ್ರಸಕ್ತ ವರ್ಷದ ಖಿರ್ದಿ ಪುಸ್ತಕ | ಆರ್.ಟಿ.ಸಿ | ಖಾತಾ ಬದಲಾವಣೆ ರಿಜಿಸ್ಟರ್ |
|---|---|---|
| ತಕರಾರು ಪ್ರಕರಣಗಳ ರಿಜಿಸ್ಟರ್ | ಇನಾಂ ರಿಜಿಸ್ಟರ್ | ಸಾಗುವಳಿಗೆ ಯೋಗ್ಯವಲ್ಲದ ಜಮೀನಿನ ತಃಖ್ತೆ |
| ಅನಧಿಕೃತ ಅತಿಕ್ರಮಣ ಪ್ರಕರಣಗಳ ರಿಜಿಸ್ಟರ್ | ಕೆಜೆಪಿ | ಆಕಾರಬಂದ್ |
| ಕುಳವಾರು ಬಾಕಿ ಪಟ್ಟಿ | ಗ್ರಾಮದ ಅಂಕಿ ಅಂಶ ವಹಿ | ಇತರೆ ಸರ್ಕಾರಿ ಬಾಕಿ ರಿಜಿಸ್ಟರ್ |

**ಉದ್ದೇಶಿತ ಜಮಾಬಂದಿ ಕಾರ್ಯವಿಧಾನ:**

ಇಂದಿಗೂ ಸಹ ಜಮಾಬಂದಿ ಪರಿಕಲ್ಪನೆ ಮತ್ತು ಕಂದಾಯ ದಾಖಲಾತಿಗಳ ಸಮರ್ಪಕ ಪರಿಪೂರ್ಣಗೊಳಿಸುವಿಕೆಯು ತುಂಬಾ ಪ್ರಾಮುಖ್ಯವಾಗಿರುತ್ತದೆ. ಏಕೆಂದರೆ ಜಮೀನಿನ ಬೆಲೆಯು ದಿನದಿಂದ ದಿನಕ್ಕೆ ಗುರುತರವಾಗಿ ಏರುತ್ತಿದೆ. ಭೂ ದಾಖಲೆಗಳಲ್ಲಿ ಆಗುವ ಒಂದು ಚಿಕ್ಕ ತಪ್ಪಿನಿಂದ ಜಮೀನು ಮಾಲೀಕರಿಗೆ/ರೈತರಿಗೆ ತುಂಬಾ ನಷ್ಟ ಉಂಟು ಮಾಡುತ್ತದೆ. ಹೀಗಾಗಿ, ಅವಶ್ಯಕ ಮಾರ್ಪಾಡುಗಳೊಂದಿಗೆ ಹಿಂದಿನ ಜಮಾಬಂದಿ ಪದ್ಧತಿಯನ್ನು ಅನುಸರಿಸುವುದು ಇಂದಿನ ಸನ್ನಿವೇಶದಲ್ಲಿ ತುಂಬಾ ಅಗತ್ಯವಾಗಿದೆ. ಪ್ರಸ್ತುತ ಬಹಳಷ್ಟು ಭೂ ದಾಖಲೆಗಳ ಗಣಕೀಕೃತಗೊಂಡಿರುವುದರಿಂದ, ಜಮಾಬಂದಿಯ ಅಗತ್ಯತೆಯ ಪ್ರಶ್ನೆ ಉದ್ಭವಿಸುವುದು ಸಹಜವಾಗಿದೆ. ಪ್ರಸ್ತುತವಿರುವ ಪಹಣಿಗಳಲ್ಲಿ ಶೇಖಡ 40% ರಷ್ಟು ಪಹಣಿಗಳು ಒಂದಾದರೂಂದು ತಪ್ಪುಗಳಿರುತ್ತವೆಂದು ಅಂದಾಜು ಮಾಡಲಾಗಿದೆ. ಇದರಿಂದ ರಾಜ್ಯಾದ್ಯಂತ ರೈತರಿಗೆ ತೊಂದರೆಯಾಗಿರುತ್ತದೆ ಕೈಬರಹ ಪಹಣಿಗಳನ್ನು ದತ್ತಾಂಶಕ್ಕೆ ತರುವಾಗ ಪಹಣಿಯಲ್ಲಿದ್ದ ತಪ್ಪುಗಳನ್ನು ಕೂಡ ತಂತ್ರಾಂಶಕ್ಕೆ ಅಳವಡಿಸಲಾಗಿರುತ್ತದೆ ಮತ್ತು ತಂತ್ರಾಂಶ ಬಂದ ನಂತರ ಸಹ ಗಣಕೀಕೃತ ಪಹಣಿಗಳಲ್ಲಿ ಅನೇಕ ತಪ್ಪುಗಳು ಇಂಡೀಕರಣವಾಗಿರುತ್ತವೆ. ಈ ಮೇಲಿನ ಕಾರಣಗಳನ್ನು ಹೊರತುಪಡಿಸಿ ಕೆಳಗಿನ ಕಾರಣಗಳಿಗೆ ಜಮಾಬಂದಿಯನ್ನು ಮುಂದುವರಿಸಲು ಅತ್ಯಗತ್ಯವಾಗಿದೆ.

1. **ಬೆಳೆ ಇಂಡೀಕರಣ:** ಇದು ನಿರಂತರ ಪ್ರಕ್ರಿಯೆ ಪ್ರತಿ ವರ್ಷ ರೈತನು ಜಮೀನಿನಲ್ಲಿ ಯಾವ ಬೆಳಯನ್ನು ಬೆಳೆಯುತ್ತಾರೆ ಎಂಬುದನ್ನು ಕಣ್ಣಾರೆ ನೋಡಿ ಆರ್.ಟಿ.ಸಿ ಯಲ್ಲಿ ಇಂಡೀಕರಿಸಬೇಕಾಗಿರುತ್ತದೆ. ತಂತ್ರಜ್ಞಾನದಲ್ಲಿ ಏನೇ ಅಭಿವೃದ್ಧಿಯಾಗಿದ್ದರೂ ಸಹ ಕ್ಷೇತ್ರ ವೀಕ್ಷಣೆಯನ್ನು ಮಾಡಿಯೇ ಬೆಳೆ ವಿವರಗಳನ್ನು ದಾಖಲಿಸಬೇಕಾಗುತ್ತದೆ. ಬೆಳೆ ಇಂಡೀಕರಣದ ಬಗ್ಗೆ ಪ್ರತ್ಯೇಕವಾಗಿ ಸರ್ಕಾರದ ಸುತ್ತೋಲೆಯನ್ನು ಹೊರಡಿಸಿದೆ.
2. **ಪೌತಿ ಖಾತೆ:** ಇದೂ ಸಹ ನಿರಂತರವಾಗಿ ಜರುಗುವ ಪ್ರಕ್ರಿಯೆ. ಏಕೆಂದರೆ ಗ್ರಾಮದಲ್ಲಿ ಯಾರೇ ಮೃತವಾದರೂ ಸಂಬಂಧಿತ ಗ್ರಾಮಲೆಕ್ಕಿಗರ ಜನನ–ಮರಣ ರಿಜಿಸ್ಟರ್‌ನಲ್ಲಿ ನೊಂದಣಿ ಮಾಡುವ ಅಧಿಕಾರಿಯಾಗಿರುತ್ತಾರೆ. ಆದ್ದರಿಂದ ಮೃತ ವಾರಸುದಾರನಿಗೆ ನಿಯಮಾನುಸಾರ ಖಾತೆ ಬದಲಾವಣೆ ಮಾಡುವುದು ಗ್ರಾಮಲೆಕ್ಕಿಗರ ಕರ್ತವ್ಯವಾಗಿರುತ್ತದೆ. ಪ್ರಸ್ತುತ ಖಾತೆದಾರರು ಮರಣಹೊಂದಿದ್ದರೂ ಕೂಡ ಪೌತಿ ಖಾತೆಗಳು ಬಾಕಿ ಇರುವುದು ಕಂಡುಬಂದಿರುತ್ತದೆ. ಆದ್ದರಿಂದ ಈ ವಿಷಯವನ್ನು ಜಮಾಬಂದಿ ಸಮಯದಲ್ಲಿ ಪರಿಶೀಲಿಸಬೇಕಾಗುತ್ತದೆ.
3. ಭೂ ಲಭ್ಯತೆ ಪಟ್ಟಿ ತಯಾರಿಕೆಯು ಒಂದು ವಾರ್ಷಿಕ ಕಾರ್ಯಕ್ರಮವಾಗಿರುತ್ತದೆ ಹಾಗೂ ಕ್ಷೇತ್ರಾಧಾರಿತ ಚಟುವಟಿಕೆಯಾಗಿದೆ.
4. ಷರತ್ತು ಆಧಾರದ ಮೇಲೆ ಸರ್ಕಾರಿ ಭೂ ಮಂಜೂರಾತಿಯ ಸಂದರ್ಭದಲ್ಲಿ ವಿಧಿಸಲಾದ ಷರತ್ತುಗಳ ಉಲ್ಲಂಘನ ಖಾತ್ರಿ ಪಡಿಸಿಕೊಂಡು ಸರ್ಕಾರಕ್ಕೆ ಜಮೀನು ವಾಪಸ್ಸು ಪಡೆಯಬೇಕಾಗುತ್ತದೆ. ಇದೂ ಸಹ ಕ್ಷೇತ್ರಾಧಾರಿತ ಚಟುವಟಿಕೆಯಾಗಿದ್ದು, ಜಮಾಬಂದಿ ವೇಳೆ ಇದಕ್ಕೆ ಸಂಬಂಧಿಸಿದ ರಿಜಿಸ್ಟರ್ ಪರಿಶೀಲಿಸಿ ಖಾತ್ರಿ ಪಡಿಸಿಕೊಳ್ಳಬೇಕು.
5. ಜಮಾಬಂದಿಯು ರೈತರು ಮತ್ತು ಇಲಾಖೆಯ ನಡುವೆ ಒಂದು ಸಂಪರ್ಕ ಸೇತುವೆ ಇದರಿಂದಾಗಿ ರೈತರ ಬಹಳಷ್ಟು ಕುಂದು ಕೊರತೆಗಳನ್ನು ಆಲಿಸಿ ಸೂಕ್ತ ಪರಿಹಾರ ಒದಗಿಸಲು ಅನುಕೂಲವಾಗುತ್ತದೆ.
6. ಇದೊಂದು ವಾರ್ಷಿಕ ಲೆಕ್ಕ ತಪಾಸಣೆಯಾಗಿದೆ. ಹಿಂದಿನ ವರ್ಷಕ್ಕೂ ಈ ವರ್ಷಕ್ಕೂ ಏನು ಬದಲಾವಣೆಯಾಗಿದೆ ಮತ್ತು ಇನ್ನಿತರ ಅಂಶಗಳ ಬಗ್ಗೆ ತಾಳೆ ನೋಡಲು ಅನುಕೂಲವಾಗುತ್ತದೆ.
7. ಭೂಮಿಯು ಕೃಷಿ ಜಮೀನಾಗಿರಲೀ ಅಥವಾ ಕೃಷಿಯೇತರ ಜಮೀನಾಗಿರಲೀ, ಭೂಮಿ ಪದ್ಧತಿಯು ಕೇವಲ ಕೃಷಿ ಜಮೀನಿನ ಮೇಲೆ ಮಾತ್ರ ಕೇಂದ್ರೀಕೃತವಾಗಿರುತ್ತದೆ. ಆದರೆ ಕೃಷಿ ಜಮೀನನ್ನು ಕೃಷಿಯೇತರ ಜಮೀನಿಗೆ (ಅನ್ಯಾಕ್ರಾಂತ) ಪರಿವರ್ತಿಸುವ ಕಾರ್ಯ ನಿರಂತರವಾಗಿ ಜರುಗುವ ಪ್ರಕ್ರಿಯೆಯಾಗಿದ್ದು, ಈ ಬಗ್ಗೆ ಅಡ್ಡ ಪರಿಶೀಲನೆ ನಡೆಸಿ ಕೃಷಿಯಿಂದ ಕೃಷಿಯೇತರವಾಗಿ ಪರಿವರ್ತನೆಯಾದ ಜಮೀನೆಷ್ಟು ? ಉಳಿದ ಕೃಷಿ ಜಮೀನೆಷ್ಟು ಎಂಬ ನಿಖರ ಮಾಹಿತಿಯು ಜಮಾಬಂದಿ ನಡೆಸಿದಾಗ ಸ್ಪಷ್ಟವಾಗಿ ಗೋಚರಿಸುವುದು.
8. ಭೂಮಿಯನ್ನು ಬಳಸಿಕೊಂಡು ಗ್ರಾಮಗಳು ಸದಾ ಬೆಳೆಯುತ್ತಿರುತ್ತವೆ. ಭೂ ಪರವರ್ತನೆ ಅಥವಾ ಮಂಜೂರಿ ಆದೇಶ ಪಡೆಯದ ಗ್ರಾಮಗಳು ಬೆಳೆಯುತ್ತಿರುತ್ತವೆ. ಈ ಬಗ್ಗೆ ಕ್ಷೇತ್ರ ತನಿಖೆ ಮಾಡಿ ಮಾಹಿತಿಯನ್ನು ನಿರ್ವಹಿಸಿ ಜಮಾಬಂದಿಯ ವೇಳೆ ಪರಿಶೀಲಿಸುವುದು ಅವಶ್ಯಕ.

9. ವಿವಿಧ ಸಾರ್ವಜನಿಕ ಉದ್ದೇಶಗಳಿಗಾಗಿ ಸರ್ಕಾರಿ ಜಮೀನು ಮಂಜೂರಾತಿ ಮಾಹಿತಿ ಹಾಗೂ ನಿಷ್ಪ್ರಯೋಜಕ ಜಮೀನನ್ನು ಸಾಗುವಳಿ ಉದ್ದೇಶಕ್ಕಾಗಿ ಮಂಜೂರಾತಿ ನೀಡಲಾದ ವಿವರಗಳ ಬಗ್ಗೆ ಅಡ್ಡ ಪರಿಶೀಲನೆಯನ್ನು ಮಾಡಬೇಕು ಇದು ಜಮಾಬಂದಿ ಪ್ರಕ್ರಿಯೆ ಜರುಗಿಸಿದರೆ ಮಾತ್ರ ಸಾಧ್ಯವಾಗುತ್ತದೆ.
10. ಭೂ ಸ್ವಾಧೀನವು ಸಹ ವಿವಿಧ ಸರ್ಕಾರದ ಉದ್ದೇಶಗಳಿಗಾಗಿ ಅವಶ್ಯಕವಾಗಿದ್ದು, ಈ ಬಗ್ಗೆಯೂ ಸಹ ಅಡ್ಡ ಪರಿಶೀಲನೆ ಮಾಡಿ ಆರ್.ಟಿ.ಸಿ.ಯಲ್ಲಿ ಇಂಡೀಕರಿಸಬೇಕಾಗುತ್ತದೆ.
11. ಕೃಷಿ ಜಮೀನನ್ನು ಅಡಮಾನ ಮಾಡಿದ ಅವಧಿ ಮೀರಿದಾಗ್ಯೂ ಸಹ ಸಾಲ ಮರುಪಾವತಿಸದೆ ಹರಾಜು ಮಾಡಲಾದ ಜಮೀನಿನ ವಿವರಗಳನ್ನು ಇಂಡೀಕರಿಸಬೇಕಾಗಿರುತ್ತದೆ. ಈ ವಿಷಯವು ನಿರಂತರವಾಗಿ ನಡೆಯುವ ಒಂದು ಪ್ರಕ್ರಿಯೆಯಾಗಿರುತ್ತದೆ. ಆದ್ದರಿಂದ ಸದರಿ ಪ್ರಕರಣಗಳ ವಿವರಗಳನ್ನು ಕಾಲ ಕಾಲಕ್ಕೆ ಪಹಣೆಯಲ್ಲಿ ಇಂಡೀಕರಿಸುವುದು ಸೂಕ್ತ ಜಮಾಬಂದಿ ವೇಳೆ ಇಂಡೀಕರಣದ ಬಗ್ಗೆ ಪರಿಶೀಲಿಸಬೇಕಾಗಿರುತ್ತದೆ.
12. ಸಿವಿಲ್ ನ್ಯಾಯಾಲಯದ ಆದೇಶಗಳನ್ನು ಆರ್.ಟಿ.ಸಿಯಲ್ಲಿ ಇಂಡೀಕರಿಸಬೇಕಾಗುತ್ತದೆ. ಸದರಿ ವಿಷಯದಲ್ಲಿ ಗೊಂದಲಗಳಿದ್ದರೆ ಜಮಾಬಂದಿ ವೇಳೆಯಲ್ಲಿ ಸಂಶಯವನ್ನು ನಿವಾರಿಸಿಕೊಳ್ಳಬಹುದು.

ಮೇಲೆ ತಿಳಿಸಿದ ಕಾರಣಗಳಿಂದಾಗಿ ಜಮಾಬಂದಿಯಿಂದ ಗ್ರಾಮ ಮಟ್ಟದ ಹಾಗೂ ತಾಲ್ಲೂಕು ಮಟ್ಟದ ಭೂ ದಾಖಲೆಗಳನ್ನು ತಾಳೆಮಾಡಿ ಸರಿಪಡಿಸಿಕೊಳ್ಳುವ ಬಗ್ಗೆ ಕೇಂದ್ರೀಕರಿಸಿ ವಾರ್ಷಿಕ ಲೆಕ್ಕ ಮಾಹಿತಿಯನ್ನು ಇಂಡೀಕರಿಸುವ ಬಗ್ಗೆ ಖಚಿತ ಪಡಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ಜಮಾಬಂದಿಗೆ ಸಂಬಂಧಿಸಿದಂತೆ ಕಂದಾಯ ಇಲಾಖೆಯ ವಿವಿಧ ಹಂತದ ಅಧಿಕಾರಿ/ನೌಕರರುಗಳು ಈ ಕೆಳಗಿನಂತೆ ಕಾರ್ಯನಿರ್ವಹಿಸುವುದು ಅವಶ್ಯಕ.

## I. <u>ಗ್ರಾಮಲೆಕ್ಕಿಗರಿಂದ ಪರಿಶೀಲನೆ:</u>

1. ಡಾಟಾ ಸ್ಥಿರತೆಯು (Data Consistency) ಗ್ರಾಮಲೆಕ್ಕಿಗರಿಂದ ಒಂದು ಬಾರಿ ಮಾತ್ರ ಮಾಡುವ ಚಟುವಟಿಕೆ ಭೂಮಿ ಉಸ್ತುವಾರಿ ಕೋಶದಿಂದ ವಿನ್ಯಾಸಗೊಳಿಸಲಾದ 56 ಕಾಲಂಗಳ ನಮೂನೆಯನ್ನು ಗ್ರಾಮಲೆಕ್ಕಿಗರುಗಳಿಗೆ ನೀಡಲಾಗುತ್ತದೆ ( ಈ ಪೈಕೆ ಸುಮಾರು 15–20 ಕಾಲಂಗಳನ್ನು ಭೂಮಿ ತಂತ್ರಾಂಶದಿಂದ & ಆಕಾರಬಂದ್ ಮಾಹಿತಿ ಪ್ರಕಾರ ಮುಂಚಿತವಾಗಿಯೇ ಭರ್ತಿಮಾಡಿ ನೀಡಲಾಗುತ್ತದೆ.)
2. ಉಳಿದ ಕಾಲಂಗಳ ಮಾಹಿತಿಯನ್ನು ಗ್ರಾಮಲೆಕ್ಕಿಗರು ತನ್ನಲ್ಲಿರುವ ವಿವಿಧ ರಿಜಿಸ್ಟರ್‌ಗಳಲ್ಲಿನ ಮಾಹಿತಿ ಆಧರಿಸಿ ಭರ್ತಿಮಾಡುವುದು.
3. ದಾಖಲೆಗಳು ಲಭ್ಯವಿಲ್ಲದ ಪಕ್ಷದಲ್ಲಿ ತಾಲ್ಲೂಕು ಕಛೇರಿಯಿಂದ ಸಂಬದಪಟ್ಟ ದಾಖಲೆಗಳನ್ನು ಪಡೆದು ನಮೂನೆಗಳನ್ನು ಭರ್ತಿ ಮಾಡಬೇಕು.
4. ಮಾಹಿತಿಯನ್ನು ಎಕ್ಸೆಲ್ (Excel Sheet) ಶೀಟ್‌ನಲ್ಲಿ ದಾಖಲಿಸುವುದು.
5. ಗ್ರಾಮಲೆಕ್ಕಿಗನು ದಾಖಲಿಸಿದ ಮಾಹಿತಿಯನ್ನು ಅಡ್ಡ ಪರಿಶೀಲಿಸಿ ತಪ್ಪುಗಳು ಕಂಡುಬಂದಲ್ಲಿ ಸರಿಪಡಿಸುವುದು.
6. ಮುಂದಿನ ವರ್ಷಗಳಲ್ಲಿ ಬದಲಾವಣೆಗಳನ್ನು ಮಾತ್ರ ಇಂಡೀಕರಿಸುವುದು.
7. ಭೂಮಂಜೂರಾತಿ/ಭೂಪರಿವರ್ತನೆ, ಪೌತಿ ಖಾತೆ ವಿವರಗಳನ್ನು ಪ್ರತಿ ವರ್ಷ ಬೆಳೆ ಇಂಡೀಕರಣ ಮಾಡುವ ಸಮಯದಲ್ಲಿ ಇಂಡೀಕರಿಸುವುದು.
8. ಮೊದಲನೆ ಸಲ ನಮೂನೆಗಳನ್ನು ಭರ್ತಿ ಮಾಡಿದ ತರುವಾಯ ಗ್ರಾಮಲೆಕ್ಕಗನು ನಿರ್ವಹಿಸಿದ ವಹಿಗಳನ್ನು ಮತ್ತು ಪಹಣಿಗಳನ್ನು ತಾಳೆ ಮಾಡಿತಪ್ಪಗಳೇನಾದರೂ ಕಂಡುಬಂದಲ್ಲಿ ಪ್ರತ್ಯೇಕ ಪಟ್ಟಿಯನ್ನು ಸಿದ್ದಪಡಿಸುವುದು ಈ ತಪ್ಪುಗಳು ಬಹಳ ವರ್ಷಗಳಿಂದ ಬಂದಿರಬಹುದು.
9. ಮೇಲಿನಂತೆ ಗುರುತಿಸಿದ ತಪ್ಪುಗಳನ್ನು ಸರಿಪಡಿಸಲು ಕ್ರಮ ಜರುಗಿಸುವುದು ಕಂದಾಯ ಇಲಾಖೆಯಿಂದ ಹೊರಡಿಸಲಾದ ಸುತ್ತೋಲೆ ಸಂ. ಆರ್‌ಡಿ 104 ಭೂದಾಸ 2012 ದಿನಾಂಕ 23/06/2012ನ್ನು ತಪ್ಪದೆ ಪಾಲಿಸುವುದು.
10. ಮೇಲೆ ಗುರುತಿಸಿಸ ತಪ್ಪುಗಳನ್ನು ಸರಿಪಡಿಸಿದ ತರುವಾಯ 56 ಕಾಲಂಗಳಿರುವ ನಮೂನೆಯಲ್ಲಿ ಬದಲಾವಣೆಗಳನ್ನು ನಮೂದಿಸುವುದು.
11. ಪ್ರತಿ ಜುಲೈ ಅಂತ್ಯದೊಳಗೆ ಗ್ರಾಮಲೆಕ್ಕಗನು ಎಲ್ಲಾ ವಹಿಗಳನ್ನು ಇಂಡೀಕರಿಸಿ ಪರಿಶೀಲನೆಗಾಗಿ ಹಾಜರು ಪಡಿಸುವುದು.
12. ಗ್ರಾಮಲೆಕ್ಕಿಗರು ವಾರ್ಷಿಕವಾಗಿ ನಿರ್ವಹಿಸಬೇಕಾದ ಚಟುವಟಿಕೆಗಳು
    - ➢ ಸರ್ಕಾರಿ ಜಮೀನು, ಪಿಟಿಸಿಎಲ್, ಅನ್ಯಕ್ರಾಂತ ಜಮೀನು ಇತರೆಗಳ ಪರಿವೀಕ್ಷಣೆ ನಡೆಸಬೇಕು.
    - ➢ ಬೆಳೆ ಇಂಡೀಕರಣ
    - ➢ ಗ್ರಾಮದಲ್ಲಿ ವಾಸಮಿರುವ ಮತ್ತು ವಾಸವಿಲ್ಲದಿರುವ ಖಾತೆದಾರರ ಪಟ್ಟಿ
    - ➢ ಕೃಷಿ ಕಾರ್ಮಿಕರ ಪಟ್ಟಿಯ ಇಂಡೀಕರಣ

## II. ಉಪ ತಹಶೀಲ್ದಾರನು ಜಮಾಬಂದಿಗೆ ಮಾಡಬೇಕಾದ ಪೂರ್ವ ಸಿದ್ದತೆಗಳು:

1. ಗ್ರಾ.ಲೆ.ರಿಗೆ ನೀಡಿದ 56 ಕಾಲಂ ನಮೂನೆ ಮತ್ತು ವಹಿಗಳನ್ನು ಉಪ ತಹಶೀಲ್ದಾರ್/ರಾಜಸ್ವ ನಿರೀಕ್ಷಕರು ಯಥೋಚಿತ (Random)) ವಾಗಿ ಕ್ಷೇತ್ರ ಪರಿಶೀಲನೆ ಮಾಡಬೇಕು.
2. ಉಪತಹಶೀಲ್ದಾರರು ಗ್ರಾಮಗಳಲ್ಲಿ/ ಗ್ರಾಮ ಲೆಕ್ಕಿಗರ ವೃತ್ತದಲ್ಲಿ ಖಾತೆದಾರರ ಸಭೆಯನ್ನು ನಡೆಸಬೇಕು.
3. ಗ್ರಾಮ ಲೆಕ್ಕಿಗರ ವೃತ್ತದಲ್ಲಿ ರೈತರಿಗೆ ಅನುಕೂಲವಾಗುವ ಹಳ್ಳಿಯಲ್ಲಿ ಖಾತೆದಾರರ ಸಭೆಯನ್ನು ನಡೆಸಬೇಕು.
4. ಪೂರ್ವ ಜಮಾಬಂದಿ ಚಟುವಟಿಕೆಗಳನ್ನು ರೈತರಿಗೆ ಮುಂಚಿತವಾಗಿ ತಿಳಿಸತಕ್ಕದ್ದು. ಇದರಿಂದ ಡಿಟ್ಟಂ/ಹುಜೂರು ಜಮಾಬಂದಿಗೆ ಹಾಜರಾಗದೆ ಇರುವ ರೈತರಿಗೆ ಅನುಕೂಲವಾಗುತ್ತದೆ.
5. ಡಿಟ್ಟಂ ಜಮಾಬಂದಿಗೆ ಪೂರ್ವಭಾವಿಯಾಗಿ ಉಪ ತಹಶೀಲ್ದಾರರು ಅವರ ವ್ಯಾಪ್ತಿಯಲ್ಲಿ ಬರುವಂತಹ 1 ಗ್ರಾಮ ಲೆಕ್ಕಿಗರ ವೃತ್ತಕ್ಕೆ ಕನಿಷ್ಠ ಪಕ್ಷ 1 ಪೂರ್ವ ಜಮಾಬಂದಿ ಪರಿಶೀಲನೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.

6. ಉಪತಹಶೀಲ್ದಾರರು ರೈತರ ಸಮಸ್ಯಗಳಿಗೆ ಸ್ಪಂದಿಸುವುದು ಮತ್ತು ಪಹಣಿಗಳಲ್ಲಿ ಯಾವುದಾದರೂ ತಪ್ಪುಗಳು ಕಂಡುಬಂದಲ್ಲಿ ದಾಖಲಿಸಿಕೊಳ್ಳುವುದು.

**ಡಿಟ್ಟಂ ಜಮಾಬಂದಿ**

1. ತಹಶೀಲ್ದಾರರು ಹೋಬಳಿವಾರು ಹೋಬಳಿ ಮಟ್ಟದಲ್ಲಿ ಡಿಟ್ಟಂ ಜಮಾಬಂದಿ ಮಾಡುವುದು.
2. ಪ್ರತಿ ಸೆಪ್ಟಂಬರ್ ತಿಂಗಳಲ್ಲಿ ಡಿಟ್ಟಂ ಜಮಾಬಂದಿ ಚಟುವಟಿಕೆಗಳನ್ನು ಪ್ರಾರಂಭಿಸುವುದು. ಡಿಟ್ಟಂ ಜಮಾಬಂದಿ ಲೆಕ್ಕವನ್ನು ಪರಿಶೀಲಿಸಲು ತಾಲ್ಲೂಕು ಮಟ್ಟದಿಂದ ಒಂದು ತಂಡವನ್ನು ಪ್ರತಿ ಹೋಬಳಿಗೆ ಒಂದು ತಿಂಗಳ ಮುಂಚೆಯೇ ನಿಯೋಜಿಸುವುದು.
3. ಸದರಿ ತಂಡವು ನಿಗದಿತ ನಮೂನೆಯಲ್ಲಿರುವ ನಮೂದುಗಳನ್ನು ಗ್ರಾಮಲೆಕ್ಕಿಗರ ವಹಿಗಳು ಮತ್ತು ಸರ್ವೆ ದಾಖಲೆಗಳೊಂದಿಗೆ ತಾಳೆ ಮಾಡುವುದು.
4. ಸದರಿ ತಂಡವು ಮತ್ತು ತಹಶೀಲ್ದಾರರು ಯಥೋಚಿತ (Random) ಆಗಿ ಸ್ಥಳ ತನಿಖೆ ಮಾಡುವುದು ಸ್ಥಳ ತನಿಖೆ ಮಾಡುವಾಗ ಉಪ ತಹಶೀಲ್ದಾರರು ಪೂರ್ವ ಜಮಾಬಂದಿ ಸಭೆ ಮಾಡಿರುವ ಗ್ರಾಮಗಳನ್ನು ಹೊರತುಪಡಿಸಿ ಉಳಿದ ಗ್ರಾಮಗಳಲ್ಲಿ ಸ್ಥಳ ತನಿಖೆ ಮಾಡುವುದು.
5. ಸ್ಥಳ ತನಿಖೆ ಮಾಡುವ ದಿನಾಂಕವನ್ನು ರೈತರಿಗೆ ಮುಂಚಿತವಾಗಿ ವ್ಯಾಪಕವಾಗಿ ಪ್ರಚಾರ ಮಾಡುವುದು.
6. 56 ಕಾಲಂ ನಮೂನೆಗಳಲ್ಲಿ ದಾಖಲಿಸಿರುವ ಮಾಹಿತಿಗಳಿಗೆ ಸಂಬಂಧಿಸಿದಂತೆ ಸ್ಥಳ ತನಿಖೆ ವೇಳೆಯಲ್ಲಿ ಸ್ಥಳದಲ್ಲಿ ಲಭ್ಯವಾಗುವ ಮಾಹಿತಿಗೆ ಹೋಲಿಸಿದಾಗ ಇವೆರೆಡು ಮಾಹಿತಿಗಳ ನಡುವೆ ಶೇಖಡ 10 ಕ್ಕಿಂತ ಹೆಚ್ಚು ವ್ಯತ್ಯಾಸ ಕಂಡುಬಂದರೆ ಸಮಬಂಧಪಟ್ಟ ಗ್ರಾಮಲೆಕ್ಕಿಗರು ಎಲ್ಲಾ ಸರ್ವೆ ನಂಬರ್‌ಗಳನ್ನು ಪುನಃ ಸ್ಥಳ ತನಿಖೆ ಮಾಡುವುದು.
7. ಪರಿಶೀಲನೆಗೆ ನಿಯೋಜಿಸಿದ ತಂಡವ ಸ್ಥಳ ತನಿಖೆ ಮತ್ತು ದಾಖಲೆಗಳನ್ನು ತಾಳೆ ಮಾಡಿದಾಗ ಕಂಡು ಬಂದ ಲೋಪದೋಷಗಳನ್ನು ಪಟ್ಟಿ ಮಾಡುವುದು.
8. ನಿಗದಿ ಪಡಿಸಿದ ದಿನಾಂಕದಂದು ಡಿಟ್ಟಂ ಜಮಾಬಂದಿಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.

**ಹುಜೂರು ಜಮಾಬಂದಿ**

1. ಹುಜೂರು ಜಮಾಬಂದಿಯನ್ನು ತಾಲ್ಲೂಕು ಮಟ್ಟದಲ್ಲಿ ಜಿಲ್ಲಾಧಿಕಾರಿ/ಸಹಾಯಕ ಆಯುಕ್ತರು ಕೈಗೊಳ್ಳಬೇಕು.
2. ಡಿಸಿ/ ಎಸಿ ಕಛೇರಿಯಿಂದ ಹುಜೂರು ಜಮಾಬಂದಿ ಲೆಕ್ಕವನ್ನು ಪರಿಶೀಲಿಸಲು ಒಂದು ತಂಡವನ್ನು ತಾಲ್ಲೂಕಿಗೆ ಪ್ರತಿ ವರ್ಷ ಅಕ್ಟೋಬರ್ ಅಂತ್ಯದೊಳಗೆ ನಿಯೋಜಿಸುವುದು.
3. ಜಮಾಬಂದಿ ಅಧಿಕಾರಿ ಅಥವಾ ನಿಯೋಜಿಸಿದ ತಂಡವು ಯಥೋಚಿತ (Random) ಆಗಿ ಸ್ಥಳ ತನಿಖೆ ಮಾಡುವುದು.
4. ತಹಶೀಲ್ದಾರರು/ ಉಪತಹಶೀಲ್ದಾರರು ಈಗಾಗಲೇ ಸ್ಥಳ ತನಿಖೆಯನ್ನು ಮಾಡಿರುವ ಗ್ರಾಮವನ್ನು ಹೊರತು ಪಡಿಸಿ, ಹುಜೂರು ಅಧಿಕಾರಿ ಅಥವಾ ತಂಡವು ಸ್ಥಳ ತನಿಖೆ ನಡೆಸುವುದು.
5. ಒಂದು ದಿವಸ ಮುಂಚಿತವಾಗಿ ಸ್ಥಳ ತನಿಖೆ ನಡೆಸುವ ಗ್ರಾಮಗಳ ಹೆಸರುಗಳನ್ನು ರೈತರಿಗೆ ತಿಳಿಸುವುದು.
6. ನಿಯೋಜಿಸಿದ ತಂಡವು ದಾಖಲೆಗಳಲ್ಲಿರುವ ನಮೂದುಗಳನ್ನು ಸ್ಥಳ ತನಿಖೆ ಜೊತೆ ತಾಳೆ ಮಾಡಿ ವಿವರವಾದ ವರದಿಯನ್ನು ಸಿದ್ದಪಡಿಸುವುದು.
7. ಪ್ರತಿ ಖಾತೆದಾರನಿಗೆ ಜಮಾಬಂದಿಯ ಮುಂಚೆ ನಡೆಯುವ ಪ್ರಕ್ರಿಯೆಯ ದಿನಾಂಕಗಳು, ದಿಟ್ಟಂ ಜಮಾಬಂದಿ ಮತ್ತು ಹುಜೂರು ಜಮಾಬಂದಿಯ ದಿನಾಂಕಗಳನ್ನು ನೋಟೀಸಿನಲ್ಲಿ ನಮೂದಿಸಿ ಕಡ್ಡಾಯವಾಗಿ ಜಾರಿ ಮಾಡುವುದು.
8. ಮೇಲೆ ತಿಳಿಸಿರುವ ಅಂದರೆ ಪೂರ್ವ ಜಮಾಬಂದಿ ಚಟುವಟಿಕೆ/ ದಿಟ್ಟಂ ಜಮಾಬಂದಿ/ಹುಜೂರು ಜಮಾಬಂದಿ ದಿನಾಂಕಗಳು ಕಡ್ಡಾಯವಾಗಿ ಪ್ರತ್ಯೇಕವಾಗಿರಬೇಕು.
9. ಮೇಲೆ ತಿಳಿಸಿರುವ 3 ಚಟುವಟಿಕೆಗಳ ದಿನಾಂಕ: ಮತ್ತು ಸ್ಥಳಗಳ ವಿವರಗಳನ್ನು ರೈತರಿಗೆ ನೀಡುವ ನೋಟೀಸಿನಲ್ಲಿ ನಮೂದಿಸಿರಬೇಕು.
10. ಭೂಮಿ ತಂತ್ರಾಂಶದಿಂದ ಮುದ್ರಿಸಿ ನೀಡಲಾದ ನಮೂನೆಯಲ್ಲಿ ಖಾತೆದಾರನ ಸಹಿಯನ್ನು ಪಡೆಯತಕ್ಕದ್ದು.
11. ಈ ನಮೂನೆಯಲ್ಲಿ ಖಾತೆದಾರನು ಬೆಳದಿರುವ ಬೆಳೆಯ ವಿವರಗಳನ್ನು ಸಹ ದಾಖಲಿಸಲು ಜಾಗವನ್ನು ಹೊಂದಿರುತ್ತದೆ.
12. ಗ್ರಾಮಗಳಲ್ಲಿರುವ ಸಾರ್ವಜನಿಕರಿಗೆ ನೋಟೀಸನ್ನು ಜಾರಿಗೊಳಿಸುವುದಲ್ಲದೇ ವ್ಯಾಪಕ ಪ್ರಚಾರಕ್ಕಾಗಿ ಟಾಮಂ ಟಾಮಂ ಹೊರಡಿಸಬೇಕು.
13. ನೋಟೀಸು ನೀಡಲಾದ ಖಾತೆದಾರರು ವಿವಿಧ ಸ್ಥಳಗಳಿಂದ ಬರುವ ಹಿನ್ನಲೆಯಲ್ಲಿ ನಿಗದಿಪಡಿಸಲಾದ ದಿನಾಂಕ ಮತ್ತು ವೇಳೆಯಲ್ಲಿ ತಪ್ಪದೇ ಜಮಾಬಂದಿಯನ್ನು ನಡೆಸತಕ್ಕದ್ದು, ನಡೆಸದೆ ಹೋದಲ್ಲಿ ರೈತರಿಗೆ ತುಂಬಾ ಅನಾನುಕೂಲವಾಗುವುದು.
14. ಹುಜೂರು ಜಮಾ ಬಂದಿಯನ್ನು 2 ದಿನಗಳ ಮಟ್ಟಿಗೆ ನಡೆಸಬೇಕು ಏಕೆಂದರೆ ಖಾತೆದಾರರೊಂದಿಗೆ ಚರ್ಚಿಸಲು ಮತ್ತು ದಾಖಲೆಗಳನ್ನು ಪರಿಶೀಲಿಸಲು ಕಾಲಾವಕಾಶ ಬೇಕಿರುತ್ತದೆ.
15. ಜಮಾಬಂದಿ ವರದಿಗಳನ್ನು ಪ್ರಾದೇಶಿಕ ಆಯುಕ್ತರ ಮುಖಾಂತರ ಸರ್ಕಾರಕ್ಕೆ ಸಲ್ಲಿಸತಕ್ಕದ್ದು

**ಜಮಾಬಂದಿ ತಪಾಸಣೆಯು ಈ ಕೆಳಗಿನ ಪರಿಶೀಲನೆಯನ್ನು ಒಳಗೊಂಡಿರಬೇಕು:**

1. ಮ್ಯುಟೇಷನ್ ಮತ್ತು ಮ್ಯುಟೇಷನ್ ವಹಿ–ಗ್ರಾಮಲೆಕ್ಕಿಗರು ನೀಡಿದ ಮಾಹಿತಿಯನ್ನು ಭೂಮಿ ದತ್ತಾಂಶದೊಂದಿಗೆ ತಾಳೆಮಾಡಿ–ಒಟ್ಟು ಮ್ಯುಟೇಷನ್, ಐಎಂಪಿ ಮತ್ತು ಸಾಮಾನ್ಯ ಮ್ಯುಟೇಷನ್,30 ದಿನಗಳ ನಂತರ 10 ದಿನಗಳಿಗಿಂತ ಹೆಚ್ಚು ವಿಳಂಬವಾಗಿರುವ ಪ್ರಕರಣಗಳ ಸಂಖ್ಯೆ, ಬಾಕಿ ಇರುವ ವಿವಾದಾಸ್ಪದ ಪ್ರಕರಣಗಳ ಸಂಖ್ಯೆ, ಬಾಕಿ ಇರುವ 79 ಎ/ಬಿ ಪ್ರಕರಣಗಳ ಸಂಖ್ಯೆ, ಬಾಕಿ ಇರುವ ಅಥವಾ ವಿಳಂಬಕ್ಕೆ ಸ್ಥಳೀಯ ಅಥವಾ ಗ್ರಾಮ ಮಟ್ಟದಲ್ಲಿ ಇರಬಹುದಾದ ಸ್ಪಷ್ಟ ಕಾರಣಗಳನ್ನು ದಾಖಲಿಸುವುದು.
2. ಹಿಂದಿನ ಜಮಾಬಂದಿ ವೀಕ್ಷಣೆ ಹಿಂದಿನ ಎಲ್ಲ ಜಮಾಬಂದಿಯ ಷರಾಗಳನ್ನು ಅನುಪಾಲನೆಗೊಂಡಿರುವ ಕುರಿತು ದೃಢಪಡಿಸಿಕೊಳ್ಳುವದು.
3. ಪಿಟಿಸಿಎಲ್ ಭೂಮಿ ವಹಿ ಮಂಜೂರದ ಪ್ರಕರಣಗಳ (ಹಿಂದುಳಿದ ವರ್ಗಗಳ) ಸರ್ವೆ ನಂಬರ್‌ವಾರು ಮಾಹಿತಿಯನ್ನು ಕ್ಷೇತ್ರ ಪರಿಶೀಲನೆ ಮಾಡುವುದು ಮಂಜೂರಾತಿ ಪಡೆದವರು ಕೃಷಿ ಚಟುವಟಿಕೆಯನ್ನು ಮಾಡುತ್ತಿರುವರೆ? ಇಲ್ಲದಿದ್ದರೆ, ಸ್ವಯಂ ಪ್ರೇರಿತವಾಗಿ ಎಷ್ಟು ಪ್ರಕರಣಗಳಲ್ಲಿ ಕ್ರಮ ಜರುಗಿಸಲಾಗಿದೆ? ಪಿಟಿಸಿಎಲ್ ಕಾಯ್ದೆ ಉಲ್ಲಂಘಿಸಿದ ಪ್ರಕರಣಗಳಲ್ಲಿ ಮೂಲ ಮಂಜೂರುದಾರರಿಗೆ ಜಮೀನು ಹಿಂತಿರುಗಿಸಿದ ಪ್ರಕರಣಗಳ ಪಟ್ಟಿಯನ್ನು ಸಿದ್ದಪಡಿಸುವುದು ಮಂಜೂರಿಯಾದ ಜಮೀನಿಗೆ ಕ್ರಯ ಮಾಡಲು ಸರ್ಕಾರದಿಂದ ಅನುಮತಿ ನೀಡಿರುವ ಪ್ರಕರಣಗಳಲ್ಲಿ ಎಷ್ಟು ಪ್ರಕರಣಗಳಲ್ಲಿ ಷರತ್ತುಗಳು ಉಲ್ಲಂಘನೆಯಾಗಿರುತ್ತದೆ? ಉಲ್ಲಂಘನೆಯಾದ ಪ್ರಕರಣಗಳಲ್ಲಿ ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಕಳುಹಿಸಲಾಗಿದೆಯೇ? ಎಂಬ ಬಗ್ಗೆ ಮಾಹಿತಿಯನ್ನು ಕ್ರೋಢೀಕರಿಸುವುದು.
4. ಷರತ್ತು ಬದ್ಧ ಮಂಜೂರಾತಿ ವಹಿ ಸರ್ವೆ ನಂಬರ್‌ವಾರು ಮಂಜೂರಾದ ಜಮೀನುಗಳ ಪಟ್ಟಿ ಹಾಗೂ ಹಿಂದಿನ ಬೆಳೆ ಋತುವಿನಲ್ಲಿ ವಿಧಿಸಲಾದ ಷರತ್ತುಗಳನ್ನು ಪೂರೈಸಲಾಗಿದೆಯೆ? ಒಂದು ಮೇಳೆ ಷರತ್ತಗಳು ಉಲ್ಲಂಘನೆಯಾಗಿದ್ದಲ್ಲಿ ಅವುಗಳ ವಿರುದ್ಧ ನಿಯಮಾನುಸಾರ ಕ್ರಮವನ್ನು ಪ್ರಾರಂಭಿಸಲಾಗಿದೆಯೇ? ಸರ್ವೆ ನಂಬರ್‌ವಾರು ಬಾಕಿಇರುವ ಮತ್ತು ಮುಕ್ತಾಯಗೊಳಿಸಲಾದ ಅಂತಹ ವಹಿವಾಟುಗಳ ಸಂಖ್ಯೆಗಳೆಷ್ಟು? ಜಮೀನನ್ನು ಸರ್ಕಾರಕ್ಕೆ ಹಿಂಪಡೆದ ಪ್ರಕರಣಗಳ ಸಂಖ್ಯೆ ಮತ್ತು ಇಂತಹ ಪ್ರಕರಣಗಳನ್ನು ಲಭ್ಯವಿರುವ ಜಮೀನಿನ ಪಟ್ಟಿಯಲ್ಲಿ ತರಲಾಗಿದೆಯೆ ಅಥವಾ ಯಾವುದೇ ಸರ್ಕಾರಿ ಉದ್ದೇಶಕ್ಕಾಗಿ ಕಾಯ್ದಿಸಲಾಗಿದೆಯೇ? ಮಂಜೂರಿಯಾದ ಜಮೀನನ್ನು ಗ್ರಾಮಲೆಕ್ಕಿಗನು ಶೇಕಡ 100 ರಷ್ಟು ಪರಿಶೀಲಿಸಲಾಗಿದೆಯೇ? ಎಷ್ಟು ಪ್ರಕರಣಗಳಲ್ಲಿ ಷರತ್ತು ಉಲ್ಲಂಘನೆಯಾಗಿವೆ ಎಂಬುದನ್ನು ಪತ್ತೆ ಹಚ್ಚಿ ಕ್ರಮ ಜರುಗಿಸಲಾಗಿದೆ?
5. ಭೂ ಸುಧಾರಣೆಯಡಿ ಮಂಜೂರಾದ ಜಮೀನಿನ ವಹಿ ಮಂಜೂರಾದ ಜಮೀನಿನ ಪಟ್ಟಿ ಸರ್ವೆ ನಂಬರ್‌ವಾರು ಮತ್ತು ಈ ಜಮೀನುಗಳಲ್ಲಿ ಯಾವುದೇ ದಾವೆ ಬಾಕಿ ಇರುವುದೇ? ಎಷ್ಟು ಪ್ರಕರಣಗಳು ಲ್ಯಾಂಡ್ ಟ್ರಿಬ್ಯುನಲ್, ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಛ ನ್ಯಾಯಾಲಯದಲ್ಲಿ ಬಾಕಿ ಇರುವ ಬಗ್ಗೆ ವಿವರ.
6. ಮಂಜೂರಿ ಉಲ್ಲಂಘನೆ ವಹಿ– ಕರ್ನಾಟಕ ಭೂ ಕಂದಾಯ ಕಾಯ್ದೆ ಅಡಿಯಲ್ಲಿ ಮಂಜೂರಿ ಷರತ್ತುಗಳು ಉಲ್ಲಂಘನೆಯಾಗಿರುವ ಪ್ರಕರಣಗಳು, ಪಿಟಿಸಿಎಲ್ ಕಾಯ್ದೆಯ ಅಡಿಯಲ್ಲಿ ಉಲ್ಲಂಘನೆಯಾಗಿರುವ ಪ್ರಕರಣಗಳು ಮತ್ತು ಇನಾಂ ರದ್ದತಿ ಕಾಯ್ದೆಯಡಿಯಲ್ಲಿ ಉಲ್ಲಂಘನೆಯಾಗಿರುವ ಪ್ರಕರಣಗಳನ್ನು ಮತ್ತು ಉಲ್ಲಂಘನೆಯಾಗಿರುವ ಬಗ್ಗೆ ಕ್ರಮವಹಿಸುವ ಕುರಿತು ಮಾಹಿತಿಯನ್ನು ಈ ವಹಿಯಲ್ಲಿ ಕ್ರೂಡಿಕರಿಸುವುದು. ಸದರಿ ಮಾಹಿತಿಯು ಮೇಲೆ ತಿಳಿಸಿರುವ ಪ್ಯಾರಾ 3 ರಿಂದ 5 ಕ್ಕೆ ತಾಳೆಯಾಗಬೇಕು.
7. 79 ಎ ಮತ್ತು ಬಿ ವಹಿ– ಈ ಕಾಯ್ದೆಯಡಿ ಎಷ್ಟು ಪ್ರಕರಣಗಳು ಬಾಕಿ ಇವೆ, ಎಷ್ಟು ಪ್ರಕರಣಗಳು ಇತ್ಯರ್ಥವಾಗಿವೆ ಎಂಬುದನ್ನು ದಾಖಲಿಸುವುದು ಇತ್ಯರ್ಥವಾಗಿರುವ ಪ್ರಕರಣಗಳಲ್ಲಿ ಎಷ್ಟು ಪ್ರಕರಣಗಳಲ್ಲಿ ಆದೇಶ ಸ್ವೀಕೃತವಾಗಿರುತ್ತವೆ, ಈ ಪೈಕಿ ಎಷ್ಟು ಪ್ರಕರಣಗಳಲ್ಲಿ ಜಮೀನನ್ನು ಸರ್ಕಾರದ ವಶಕ್ಕೆ ಪಡೆದಿಕೊಳ್ಳಲಾಗಿದೆ ಎಂಬುದನ್ನು ನಮೂದಿಸುವುದು.
8. ಗ್ರಾಮದಲ್ಲಿ ವಾಸ ಇಲ್ಲದ ಖಾತೆದಾರರ ವಿಳಾಸ ವಹಿ– ಸದರಿ ವಹಿಯನ್ನು ಇಂಡೀಕರಿಸಲಾಗಿದೆಯೇ? ಎಷ್ಟು ಖಾತೆದಾರರು ಗ್ರಾಮಲೆಕ್ಕಿಗರ ಮುಂದೆ ಹಾಜರಾಗಿರುವುದಿಲ್ಲ? ಎಷ್ಟು ಪ್ರಕರಣಗಳಲ್ಲಿ ಮೃತಹೊಂದಿರುವ ಖಾತೆದಾರರನ್ನು ಪತ್ತೆ ಹಚ್ಚಿ ಖಾತೆ ನಡವಳಿಗಳನ್ನು ಪ್ರಾರಂಭಿಸಲಾಗಿದೆ? ಎಷ್ಟು ಪ್ರಕರಣಗಳಲ್ಲಿ ಖಾತೆದಾರರ ವಿಳಾಸ ಪತ್ತೆ ಹಚ್ಚಲಾಗಿದೆ? ಎಷ್ಟು ಪ್ರಕರಣಗಳಲ್ಲಿ ಭೂಸುಧಾರಣೆ ಕಾಯ್ದೆಯಡಿ ಕ್ರಮ ಜರುಗಿದಸಲಾಗಿ?
9. ಗ್ರಾಮಸ್ಥರ ವಿವರ ವಹಿ ಗ್ರಾಮದಲ್ಲಿರುವ ಎಲ್ಲಾ ಕುಟುಂಬಗಳು ಹಾಗೂ ಸದಸ್ಯರ ವಿವರವನ್ನು ಸೆನ್ಸಸ್ ಮಾಹಿತಿಯಿಂದ ಪಡೆದು, ಪ್ರತಿ ವರ್ಷ ಕುಟುಂಬಗಳ ವಿವರ ಗ್ರಾಮದಲ್ಲಿ ವಾಸವಿರುವ ಕುಟುಂಬದ ಸದಸ್ಯರು ಹಾಗೂ ಬೇರಡೆ ವಾಸವಿರುವ ಕುಟುಂಬದ ಸದಸ್ಯರ ವಿವರ ಮತ್ತು ವಿಳಾಸದೊಂದಿಗೆ ಕಾಲೋಚಿತಗೊಳಿಸುವುದು.
10. ಭೂ ಪರಿವರ್ತನೆ ವಹಿ ಗ್ರಾಮವಾರು ಎಷ್ಟು ಸರ್ವೆ ನಂಬರ್‌ಗಳಲ್ಲಿ ಭೂಪರಿವರ್ತನೆಯಾಗಿರುತ್ತದೆ? ಯಾವ ಉದ್ದೇಶಕ್ಕಾಗಿ ಪರಿವರ್ತನೆಯಾಗಿರುತ್ತದೆ? ಸ್ಥಳ ತನಿಖೆಯಲ್ಲಿ ಭೂಪರಿವರ್ತನೆಯಾದ ಜಮೀನು ಉದ್ದೇಶಿತ ಉದ್ದೇಶಕ್ಕೆ (ವಸತಿ, ಕೈಗಾರಿಕೆ, ವಾಣಿಜ್ಯ) ಬಳಸಲಾಗುತ್ತಿದೆಯೇ? ಭೂಪರಿವರ್ತನೆಯಾದ ಸರ್ವೆ ನಂಬರ್‌ಗಳಲ್ಲಿ ಎಷ್ಟು ಪ್ರಕರಣಗಳು ಪೋಡಿಗೆ ಬಾಕಿ ಇರುತ್ತವೆ ಮತ್ತು ಬಾಕಿಗೆ ಕಾರಣ?
11. ಕಮ್ಮಿ ಜಾಸ್ತಿ ಪತ್ರಿಕೆ ಈ ಹಿಂದೆ ಅನುಸರಿಸುತ್ತಿದ್ದ ಪದ್ದತಿಯನ್ನು ಅನುಸರಿಸುವುದು.
12. ಬೆಳೆಯ ವಹಿ– ಸರ್ವೆ ನಮಬರ್‌ವಾರು ಖಾತೆದಾರರ ಸಹಿಯುಳ್ಳ ಬೆಳೆಯ ಮಾಹಿತಿಯನ್ನು ಮುಂಚಿತವಾಗಿ ಸಿದ್ದಪಡಿಸುವುದು ಖಾತದಾರರಿಗೆ ನೀಡಿರುವ ಜಮಾಬಂದಿಯ ತಿಳುವಳಿಕೆ ನೋಟೀಸಿನಿಂದ ಈ ಬೆಳೆ ಮಾಹಿತಿಯನ್ನು ಸಂಗ್ರಹಿಸುವುದು.

ಸರ್ವೆ ನಂಬರ್‌ವಾರು ಯಥೋಚಿತ (Randam) ಆಗಿ ಖಾತೆದಾರರು ನೀಡುರುವ ಬೆಳೆ ಮಾಹಿತಿಯು ಸರಿ ಇದೆ ಎಂಬುದನ್ನು ಸ್ಥಳ ತನಿಖೆಯಿಂದ ಖಚಿತಪಡಿಸಿಕೊಳ್ಳುವುದು ಶೇಖಡ 10 ಕ್ಕಿಂತ ಹೆಚ್ಚಿನ ಪ್ರಕರಣಗಳಲ್ಲಿ ವ್ಯತ್ಯಾಸ ಕಂಡುಬಂದರೆ ಗ್ರಾಮಲೆಕ್ಕಿಗನು ಎಲ್ಲಾ ಸರ್ವೆ ನಂಬರ್‌ಗಳನ್ನು ಸ್ಥಳ ತನಿಖೆ ಮಾಡಿ ಪರಿಶೀಲಿಸತಕ್ಕದ್ದು. ಮುಂದುವರೆದು ಮೇಲಾಧಿಕಾರಿಗಳು ಮಾಡಿರುವ ಪರಿಶೀಲನೆಯನ್ನು ಪುನಃ ಪರಿಶೀಲಿಸುವುದು.

ಮೋಜಿಣಿನಿಂದ ಪಡೆದ ಬೆಳೆ ವಿವರಗಳನ್ನು 11–ಇ ನಕ್ಷೆ, ತತ್ಕಾಲ್ ಪೋಡಿ ಮತ್ತು ಇತರೆ ಸರ್ವೆ ಕೆಲಸಗಳನ್ನು ಪೂರೈಸಿದಾಗ ನಮೂದಿಸಿದ ಬೆಳೆ ವಿವರಗಳನ್ನು ಈ ವಹಿಯೊಂದಿಗೆ ಪರಿಶೀಲಿಸಬೇಕು.

ಬೆಳೆಗಳ ವಹಿಗಳಲ್ಲಿ ನಮೂದಿಸಿರುವ ವಿವಿಧ ಬೆಳೆಗಳ ವಿಸ್ತೀರ್ಣ, ಗ್ರಾಮದ ಒಟ್ಟು ಭೌಗೋಳಿಕ ವಿಸ್ತೀರ್ಣ ಭೂಮಿ ತಂತ್ರಾಂಶದಲ್ಲಿರುವ ವಿಸ್ತೀರ್ಣದ ಜೊತೆ ತಾಳೆಯಾಗಬೇಕು.

13. ಬಂಜರು ತಖ್ತೆ: ಮೊದಲಿಗೆ ಹೊಸದಾಗಿ ನೀಡಿರುವ ನಮೂನೆಯಲ್ಲಿ ನಿರ್ವಹಿಸಿರುತ್ತಾರೆಯೇ ಎಂದು ಪರಿಶೀಲಿಸುವುದು.
    1. ಅರಣ್ಯ ಜಮೀನನ್ನು ಹೊರತುಪಡಿಸಿ ಎಲ್ಲಾ ಸರ್ಕಾರಿ ಜಮೀನನ್ನು ಗ್ರಾಮ ಲೆಕ್ಕಿಗರು ಸ್ಥಳ ತನಿಖೆ ಮಾಡಿರುತ್ತಾರೆಯೇ ?
    2. ಸದರಿ ತಖ್ತೆಯನ್ನು ಭೂಜಮೀನು ಲಭ್ಯತೆ ಪಟ್ಟಿಯನ್ನು ಸಿದ್ದಪಡಿಸಲು ಉಪಯೋಗಿಸಲಾಗಿದೆಯೇ?
    3. ಭೌತಿಕವಾಗಿ ಸರ್ಕಾರಿ ಜಮೀನು ಮಂಜೂರಾತಿಗೆ ಲಭ್ಯತೆ ಇದ್ದು, ಭೂಲಭ್ಯತೆ ಪಟ್ಟಿಯಲ್ಲಿ ದಾಖಲಾಗದಿದ್ದರೆ, ಅದಕ್ಕೆ ಕಾರಣಗಳು.
    4. ಬಂಜರು ತಖ್ತೆಯಲ್ಲಿ ತೋರಿಸಿದ ಸರ್ಕಾರಿ ಜಮೀನುಗಳು ಒತ್ತುವರಿಯಾಗಿದ ಬಗ್ಗೆ ವಿವರಣೆ.
    5. ಸರ್ಕಾರಿ ಜಮೀನು ಒತ್ತುವರಿಯಾಗಿದ್ದಲ್ಲಿ, ಒತ್ತುವರಿ ತೆರವುಗೊಳಿಸಲು ತೆಗೆದುಕೊಂಡ ಕ್ರಮಗಳ ಬಗ್ಗೆ ವಿವರ ಜಮಾಬಂದಿ ಅಧಿಕಾರಿಯು ಒತ್ತುವರಿ ತೆರವುಗೊಳಿಸದಿರಲು ಗ್ರಾಮಲೆಕ್ಕಿಯು ನೀಡಿದ ಕಾರಣ ಸಮಂಜಸವಲ್ಲವೆಂದು ಹುಜೂರು ಜಮಾಬಂದಿ ಅಧಿಕಾರಿಗಳಿಗೆ ಮನವರಿಕೆಯಾದಲ್ಲಿ ಅವರು ತೆಗೆದುಕೊಂಡ ಶಿಸ್ತು ಕ್ರಮ.
    6. ದಿಟ್ಟಣ ಜಮಾಬಂದಿ ಅಧಿಕಾರಿಯು ಬಂಜರು ತಖ್ತೆಯಲ್ಲಿರುವ ಯಾವುದಾದರೂ ಸರ್ವೆ ನಂಬರ್‌ಗಳನ್ನು ಸ್ಥಳ ಪರಿಶೀಲನೆ ಮಾಡಿರುತ್ತಾರೆಯೆ ಎಂಬ ಬಗ್ಗೆ ಪರಿಶೀಲಿಸುವುದು.
    7. ಒಟ್ಟು ಬೆಳೆಯ ವಿಸ್ತೀರ್ಣ, ಬಂಜರು ತಖ್ತೆಯಲ್ಲಿರುವ ವಿಸ್ತೀರ್ಣ (ಅರಣ್ಯ ಜಮೀನು ಸೇರಿಸಿ) ಗ್ರಾಮ ಠಾಣಾ ವಿಸ್ತೀರ್ಣವು ಗ್ರಾಮದ ಭೌಗೋಳಿಕ ವಿಸ್ತೀರ್ಣಕ್ಕೆ ತಾಳೆಯಾಗುತ್ತಿದೆಯೇ ?
    8. ಭೂಮಿ ತಂತ್ರಾಶಂದಲ್ಲಿರುವ ಗ್ರಾಮದ ಭೌಗೋಳಿಕ ವಿಸ್ತೀರ್ಣ ಆಕಾರಬಂದ್‌ನಲ್ಲಿರುವ ವಿಸ್ತೀರ್ಣಕ್ಕೆ ತಾಳೆಯಾಗುತ್ತಿದೆಯೇ? ಇಲ್ಲವೆಂದರೆ ವಿಸ್ತೀರ್ಣ ಸರಿಪಡಿಸಲು ಯಾವ ಯೋಜನೆ ಸಿದ್ದಪಡಿಸಿದೆ?
14. ಬಾಂದ್‌ಕಲ್ ಸಹಿ ಸದರಿ ವಹಿಯನ್ನು ಪೂರ್ಣವಾಗಿ ನಿರ್ಲಕ್ಷಿಸಲಾಗಿದೆ. ಆದರೂ ಸಹ ಕೆಲವು ಸರ್ವೆ ನಂಬರ್‌ಗಳಿಗಾದರೂ ಈ ವಹಿಯನ್ನು ನಿರ್ವಹಿಸುವುದು ಕಡ್ಡಾಯ. Principles of control network establishment ಆಧರಿಸಿ ಡಿಡಿಎಲ್‌ಆರ್/ಎಡಿಎಲ್‌ಆರ್ ರವರು ಯಾವ ಸರ್ವೆ ನಂಬರ್‌ಗೆ ಬಾಂದ್‌ಕಲ್ ವಹಿಯನ್ನು ನಿರ್ವಹಿಸಬೇಕೆಂದು ನಿರ್ಧರಿಸುತ್ತಾರೆ. ಜಮಾಬಂದಿ ಅಧೀಕಾರಿಯು ಬಾಂದ್‌ಕಲ್‌ಗಳನ್ನು ಪರಿಶೀಲಿಸಬೇಕು. ಮುಂದುವರಿದು ಭೂಮಾಪಕರು ಕಡ್ಡಾಯವಾಗಿ ಗ್ರಾಮದಲ್ಲಿ ಬರುವ ಎಲ್ಲಾ ಬಾಂದ್‌ಕಲ್‌ಗಳನ್ನು ಗ್ರಾಮಲೆಕ್ಕಿಗರು ನೀಡುವ ವರದಿಯನ್ನಾಧರಿಸಿ ಪರಶೀಲಿಸಬೇಕು. ಯಾವುದಾದರು ಬಾಂದ್‌ಕಲ್‌ಗಳಿಗೆ ಹಾನಿಯಾಗಿದ್ದಲ್ಲಿ/ ಬಾಂದ್‌ಕಲ್‌ಗಳು ಸ್ಥಳಾಂತರಗೊಂಡಿರುವ ಪ್ರಕರಣಗಳಲ್ಲಿ ಸೂಕ್ತ ಕ್ರಮ ಕೈಗೊಳ್ಳಲು ವರದಿಯನ್ನು ಭೂಮಾಪಕರು ಸಿದ್ದಪಡಿಸುವುದು ಜಮಾಬಂದಿ ಅಧಿಕಾರಿಯು ಬಾಂದ್‌ಕಲ್‌ಗಳಿಗೆ ಹಾನಿಯಾಗಿದ್ದಲ್ಲಿ/ ಸ್ಥಳಾಂತರಗೊಂಡಿರುವ ಪ್ರಕರಣಗಳಲ್ಲಿ ಸ್ಥಳ ಪರಿಶೀಲನೆ ಮಾಡಿ ಸೂಕ್ತ ಕ್ರಮ ಜರುಗಿಸಿದ್ದಾರೆಯೆ ಎಂಬ ಬಗ್ಗೆ ಖಚಿತಪಡಿಸಿದಕೊಳ್ಳುವುದು.
15. ಡಿಸಿಬಿ ವಹಿ ಭೂಮಿ ತಂತ್ರಾಂಶದಿಂದ ಡಿಸಿಬಿ ವಹಿ ಪಡೆಯುವವರೆಗೆ ಹಿಂದಿನ ಪದ್ದತಿಯನ್ನು ಮುಂದುವರಿಸುವುದು. ಕೆಜೆಪಿ ವಹಿ ಜೊತೆ ಡಿಸಿಬಿ ವಹಿಯನ್ನು ತಾಳೆ ಮಾಡಿ ವ್ಯತ್ಯಾಸ ಕಂಡುಹಿಡಿಯುವುದು.
16. ಜನನ ಮತ್ತು ಮರಣ ಮಹಿ ಸದರಿ ವಹಿಯನ್ನು ಹಿಂದಿನ ಪದ್ದತಿಯಂತೆ ನಿರ್ವಹಿಸುವುದು, ಈ ವಹಿಯನ್ನು ಜನ ಗಣತಿಗೆ ತಾಳೆ ಮಾಡಿ ಗ್ರಾಮದ ಜನ ಸಂಖ್ಯೆಯನ್ನು ಕಂಡುಹಿಡಿಯುವುದು. ಜನನವಾದ ನಂತರ ಕೃಷಿ ಕುಟುಂಬದ ಸದಸ್ಯನಾಗಿ ಅಥವಾ ಜಂಟಿ ಖಾತೆದಾರರಾಗಿ ಸೇರಿಸಲಾಗಿದೆಯೇ? ಖಾತೆದಾರನು ಮರಣವಾದ ಮಾಹಿತಿ ಬಂದ ಕೂಡಲೇ ಗ್ರಾಮಲೆಕ್ಕಿಗನು ಪೌತಿ ಖಾತೆಯನ್ನು ಇಂಡೀಕರಿಸುವ ಕ್ರಮ ಅನುಸರಿಸುತ್ತಿದ್ದಾರೆಯೇ?
17. ಕೃಷಿ ಕುಟುಂಬದ ವಹಿ/ ಜಂಟಿ ಖಾತೆದಾರರ ವಹಿ ಕಾನೂನು ಬದ್ದ ವಾರಸುದಾರರ ಪಟ್ಟಿಯಲ್ಲಿ ವಿವಾಹಿತ ಹೆಣ್ಣು ಮಕ್ಕಳ ಹೆಸರನ್ನು ಜಂಟಿ ಖಾತೆಯಲ್ಲಿ ಸೇರಿಸಿದ್ದಾರೆಯೇ? ಪ್ರತಿ ವರ್ಷ ಖಾತೆದಾರರಿಂದ ಈ ವಹಿಯಲ್ಲಿ ಸಹಿ ಪಡೆಯಬೇಕು. ಈ ಮಾಹಿತಿಯನ್ನು ಮ್ಯುಟೇಷನ್ ಮಾಡುವಾಗ ಮತ್ತು ಮೃತರ ಕುಟುಂಬದ ಸದಸ್ಯರು ದೃಢೀಕರಣ ಪತ್ರ ನೀಡುವಾಗ ಬಳಸಬೇಕು ಈ ಮಾಹಿತಿಯನ್ನು ಸದರಿ ವಹಿಯಲ್ಲಿ ಇಂಡೀಕರಿಸುವಾಗ ಉಪಯೋಗಿಸಲಾಗಿದೆಯೇ? ಸದರಿ ಮಾಹಿತಿಯು ಜನನ ಮತ್ತು ಮರಣ ವಹಿಯೊಂದಿಗೆ ತಾಳೆಯಾಗುತ್ತಿದೆಯೇ?
18. ಕೃಷಿ ಕಾರ್ಮಿಕರ ವಹಿ ಜಮೀನಿಲ್ಲದ ಕುಟುಂಬಗಳು ಅದರ ಕುಟುಂಬ ಸದಸ್ಯರು ಮತ್ತು ಉದ್ಯೋಗ ವಿವರಗಳನ್ನು ಈ ವಹಿಯಲ್ಲಿ ನಮೂದಿಸುವುದು. ಸದರಿ ಕುಟುಂಬವು ಕೃಷಿ ಕಾರ್ಮಿಕರೇ ಅಥವಾ ಬೇರೆ ಉದ್ಯೋಗದಲ್ಲಿ ನಿರತರಾಗಿರುತ್ತಾರೆಯೇ ಎಂಬುದನ್ನು ಇಂಡೀಕರಿಸುವುದು,. ಪ್ರತಿ ವರ್ಷವು ಈ ವಹಿಯನ್ನು ಇಂಡೀಕರಿಸಬೇಕು ಮತ್ತು ಕೃಷಿ ಕಾರ್ಮಿಕರ ಪಟ್ಟಿಯನ್ನು ಗ್ರಾಮದಲ್ಲಿ ನಿಯಮಾನುಸಾರ ಪ್ರಕಟಿಸಲಾಗಿದೆಯೇ? ಈ ಬಗ್ಗೆ ತಕರಾರು ಬಂದಲ್ಲಿ ನಿಯಮಾನುಸಾರ ಕ್ರಮ ಜರುಗಿಸಲಾಗಿದೆಯೇ?
19. ಜೀವಂತ ಕುಟುಂಬ ಸದಸ್ಯರ ವಹಿ ಗ್ರಾಮಲೆಕ್ಕಿಗರು ಹಿಂದಿನ ವರ್ಷದಲ್ಲಿ ನೀಡಿರುವ ಜೀವಂತ ಕುಟುಂಬ ಸದಸ್ಯರ ದೃಢೀಕರಣ ಪತ್ರಗಳ ಮಾಹಿತಿಯನ್ನು ಈ ವಹಿಯಲ್ಲಿ ನಮೂದಿಸುವುದು. ಜಿಮಾಬಂದಿ ಅಧಿಕಾರಿಯು ಸದರಿ ವಹಿಯನ್ನು ಕೃಷಿ ಕಾರ್ಮಿಕರ ವಹಿ ಮತ್ತು ಕೃಷಿ ಕುಟುಂಬದ ವಹಿ/ಜಂಟಿ ಖಾತೆದಾರರ ವಹಿಗಳೊಂದಿಗೆ ತಾಳೆ ಮಾಡಿ ಪರಿಶೀಲಿಸಬೇಕು.
20. ಖಾತೆ ವಹಿ– ಖಾತೆದಾರರ ವಿವರಗಳನ್ನು ಸರಿಯಾಗಿ ನಮೂದಿಸಿ ಇಂಡೀಕರಿಸಲಾಗಿದೆಯೇ? ಸದರಿ ಮಹಿತಿಯನ್ನು ಭೂಮಿ ತಂತ್ರಾಂಶದ ಜೊತೆ ತಾಳೆ ಮಾಡಲಾಗಿದೆಯೇ?

21. ತಕರಾರು ವಹಿ ತಕರಾರುಗಳನ್ನು ಇಂಡೀಕರಿಸಲಾಗಿದೆಯೇ? ಸದರಿ ಮಾಹಿತಿಯನ್ನು ಭೂಮಿ ತಂತ್ರಾಂಶದ ಜೊತೆ ಪರಿಶೀಲಿಸಿದೆಯೇ?

22. ರಸೀದಿ ಪುಸ್ತಕ ದಿನಂ ಪ್ರತಿ ಸಂಗ್ರಹಿಸಲಾದ ತೆರಿಗೆ ಮೊತ್ತವನ್ನು ಖಜಾನೆಗೆ ಜಮಾ ಮಾಡಲಾಗಿದೆಯೇ? ಸದರಿ ರಸೀದಿಯನ್ನು ಡಿಸಿಬಿ ವಹಿಯೊಂದಿಗೆ ತಾಳೆ ನೋಡಲಾಗಿದೆಯೇ? ವ್ಯತ್ಯಾಸವಿದ್ದಲ್ಲಿ, ವ್ಯತ್ಯಾಸಕ್ಕೆ ಕಾರಣವನ್ನು ನಮೂದಿಸಲಾಗಿದೆಯೇ?

23. ರೋಜ್ ಖಿರ್ದಿ/ಖಿರ್ದಿ ರಸೀದಿ ಪುಸ್ತಕವನ್ನು ಈ ವಹಿಯೊಂದಿಗೆ ತಾಳೆ ಮಾಡಲಾಗಿದೆಯೇ? ವ್ಯತ್ಯಾಸವಿದ್ದಲ್ಲಿ, ವ್ಯತ್ಯಾಸಕ್ಕೆ ಕಾರಣವನ್ನು ನಮೂದಿಸಲಾಗಿದೆಯೇ?

24. ವಾಸ ಸ್ಥಳ ದೃಢೀಕರಣ ಪತ್ರ ವಹಿ–ಗ್ರಾಮಲೆಕ್ಕಿಗರು ಹಿಂದಿನ ವರ್ಷದಲ್ಲಿ ನೀಡಿರುವ ವಾಸಸ್ಥಳ ದೃಢೀಕರಣ ಪತ್ರಗಳ ಮಾಹಿತಿಯನ್ನು ಈ ವಹಿಯಲ್ಲಿ ನಮೂದಿಸುವುದು. ಈ ಮಾಹಿತಿಯನ್ನು ಕೃಷಿ ಸದಸ್ಯರ ವಹಿಯೊಂದಿಗೆ ತಾಳೆ ಮಾಡಬೇಕು. ಮುಂದುವರೆದು ಸದರಿ ದೃಢೀಕರಣ ಪತ್ರವನ್ನು ನೀಡುವಾಗ ಗ್ರಾಮ ಪಂಚಾಯತಿಯ ಕಾರ್ಯದರ್ಶಿಯವರ ವರದಿಯನ್ವಯ ನೀಡಿದ್ದಾರೆಯೇ? ಈ ದೃಢೀಕರಣ ನೀಡುವ ಬಗ್ಗೆ ವಿವರವಾದ ಮಾಹಿತಿಗಾಗಿ ಪ್ರತ್ಯೇಕ ಸುತ್ತೋಲೆಯನ್ನು ನೀಡಲಾಗುವುದು.

25. ಸಾಲ್ವೆನ್ಸಿ/ಸಾಲ ತೀರುವಳಿ ದೃಢೀಕರಣ ಪತ್ರ ವಹಿ–ಪಟ್ಟಿಯನ್ನು ನಿರ್ವಹಿಸುವುದು. ಸದರಿ ದೃಢೀಕರಣ ಪತ್ರವನ್ನು ನೀಡುವ ಮುನ್ನ ಭೂಮಿ ತಂತ್ರಾಶದೊಂದಿಗೆ ತಾಳೆ ಮಾಡಿ ವಿತರಣೆ ಮಾಡಬೇಕು. ಜಮಾಬಂದಿ ಅಧಿಕಾರಿಯು ಭೂಹಿಡುವಳಿಗೆ ಅನುಗುಣವಾಗಿ ಸದರಿ ದೃಢೀಕರಣ ಪತ್ರವನ್ನು ನೀಡಿದ್ದಾರೆಯೇ ಎಂದು ಪರಿಶೀಲಿಸಬೇಕು.

26. ಜಾತಿ ಮತ್ತು ಆದಾಯ ದೃಢೀಕರಣ ಪತ್ರ ವಹಿ–ಜಾತಿ ಮತ್ತು ಆದಾಯ ದೃಢೀಕರಣ ಪತ್ರ ವಿತರಿಸಿದ ಬಗ್ಗೆ ಮತ್ತು ಅರ್ಜಿದಾರರ ಭೂ ಹಿಡುವಳಿ, ಬೆಳೆಗಳು ಮತ್ತು ಆದಾಯದ ಬಗ್ಗೆ ನಮೂದಿಸುವುದು ಒಬ್ಬರಿಗೆ ಒಂದಕ್ಕಿಂತ ಹೆಚ್ಚು ಬಾರಿ ದೃಢೀಕರಣ ಪತ್ರವನ್ನು ನೀಡಲ್ಪಟ್ಟಿದೆಯೇ? ನೀಡಿದ್ದರೆ ಕಾರಣಗಳನ್ನು ಜಮಾಬಂದಿ ಅಧಿಕಾರಿಯು ಪರಿಶೀಲಿಸುವುದು.

27. ಪಿಂಚಣಿ ನೀಡಿರುವ ವಹಿ–ಗ್ರಾಮದಲ್ಲಿ ಇರುವ ಫಲಾನುಭಾವಿಗಳ ಹೆಸರನ್ನು ನಮೂದಿಸಬೇಕು, ಮರಣವಾದ ಫಲಾನುಭಾವಿಗಳನ್ನು ತೆಗೆದುಹಾಕಿರುವ ಬಗ್ಗೆ ಜಮಾಬಂದಿ ಅಧಿಕಾರಿಯು ಪರಿಶೀಲಿಸಬೇಕು.

28. ಭೂಸ್ವಾಧೀನ ವಹಿ–4 (1) ಅಧಿಸೂಚನೆ, 6(1) ಅಧಿಸೂಚನೆ ಮತ್ತು ಅಂತಿಮ ಐತೀರ್ಪನ್ನು ಸರ್ವೆ ನಂಬರ್‌ವಾರು ಈ ವಹಿಯಲ್ಲಿ ಇಂಡೀಕರಿಸಬೇಕು, ವಿಶೇಷ ಭೂಸ್ವಾಧೀನಾಧಿಕಾರಿ, ವಿವಿಧ ಸಂಸ್ಥೆಗಳಾದ KHB, KIADB, KSHIP, NH ಇನ್ನಿತರ ಸಂಸ್ಥೆಗಳಿಂದ ಭೂಸ್ವಾಧೀನ ಪ್ರಕ್ರಿಯೆ ನಡೆಯುವಾಗ ಜೆಎಂಸಿಯನ್ನಾಧರಿಸಿ ಈ ವಹಿಯನ್ನು ಇಂಡೀಕರಿಸಬೇಕು.

ಈ ಆದೇಶ ಜಾರಿಗೆ ಬಂದ ದಿನಾಂಕದಿಂದ ಈ ಹಿಂದೆ ಜಮಾಬಂದಿ ಕುರಿತು ಸರ್ಕಾರದಿಂದ ಹೊರಡಿಸಲಾದ ಸುತ್ತೋಲೆ ಹಾಗೂ ಆದೇಶಗಳು ರದ್ದಾಗುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–1)

PR. 562
SC. 2000

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2014–15 ಸಾಲಿನಿಂದ ಜಾರಿಗೆ ಬರುವಂತೆ ರಾಜ್ಯದಲ್ಲಿರುವ ಸರ್ಕಾರಿ ಮತ್ತು ಖಾಸಗಿ ಫಾರ್ಮಸಿ ಕಾಲೇಜುಗಳಲ್ಲಿನ ಬಿ–ಫಾರ್ಮ ಮತ್ತು ಫಾರ್ಮ–ಡಿ ಕೋರ್ಸ್‌ಗಳ ಶುಲ್ಕ ಪರಿಷ್ಕರಣೆ ಬಗ್ಗೆ–ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಆಕುಕ 41 ಎಂ.ಪಿ.ಎಸ್. 2000, ದಿನಾಂಕ:18.06.2001.
2. ಸರ್ಕಾರದ ಆದೇಶ ಸಂಖ್ಯೆ: 188 ಪಿಟಿಡಿ 2013, ದಿನಾಂಕ:30.07.2013 ಹಾಗೂ 21.11.2013 ಹಾಗೂ ಸಮಸಂಖ್ಯೆ ಪತ್ರ ದಿನಾಂಕ:26.03.2014.
3. ಪತ್ರ ಸಂಖ್ಯೆ: ಔನಿಇ/46/ಯೋಜನೆ/2013–14,ದಿನಾಂಕ:01.04.2014:

**ಪ್ರಸ್ತಾವನೆ:**

ರಾಜ್ಯದಲ್ಲಿನ ಸರ್ಕಾರಿ ಮತ್ತು ಖಾಸಗಿ ಫಾರ್ಮಸಿ, ನರ್ಸಿಂಗ್, ಫಿಜಿಯೋಥೆರಪಿ ಮತ್ತು ಇತರೆ ಪ್ಯಾರಾಮೆಡಿಕಲ್ ಕೋರ್ಸ್‌ಗಳ ಬೋಧನಾ ಹಾಗೂ ಇನ್ನಿತರೆ ಶುಲ್ಕಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿನ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಲಾಗಿತ್ತು.

ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ ಮತ್ತು ಖಾಸಗಿ ಔಷಧ ವಿಜ್ಞಾನ ಮಹಾವಿದ್ಯಾಲಯಗಳ ಸರ್ಕಾರಿ ಮತ್ತು ಖಾಸಗಿ ಕೋಟಾಗಳ ಸೀಟುಗಳ ಬೋಧನಾ ಶುಲ್ಕವನ್ನು ನಿಗದಿಪಡಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಔಷಧ ನಿಯಂತ್ರಕರ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿಯನ್ನು ರಚಿಸಲಾಗಿತ್ತು.

ಔಷಧ ನಿಯಂತ್ರಕರು ಹಾಗೂ ಅಧ್ಯಕ್ಷರು, ಬೋಧನಾ ಶುಲ್ಕ ಸಲಹಾ ಸಮಿತಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ:(3)ರಲ್ಲಿ ಸಲ್ಲಿಸಿರುವ ವರದಿಯಲ್ಲಿ 2014–15ನೇ ಸಾಲಿಗೆ ಸಂಬಂಧಿಸಿದಂತೆ ನೆರೆ ರಾಜ್ಯಗಳಲ್ಲಿನ ಫಾರ್ಮಸಿ ಕಾಲೇಜುಗಳಲ್ಲಿನ ಬೋಧನಾ ಶುಲ್ಕ ಮತ್ತು ಕರ್ನಾಟಕದ ಕೆಲವು ಕಾಲೇಜಿನವರು ಕಳುಹಿಸಿರುವ ಒಬ್ಬ ವಿದ್ಯಾರ್ಥಿಯ ಮೇಲಿನ ವಾರ್ಷಿಕ ವೆಚ್ಚಗಳನ್ನು ಪರಿಗಣನೆಗೆ ತೆಗೆದುಕೊಂಡು ಈ ಕೆಳಗಿನಂತೆ ಶಿಫಾರಸ್ಸು ಮಾಡಿದೆ:–

ಶಿಫಾರಸ್ಸು ಮಾಡಲಾಗಿರುವ ಬಿ.ಫಾರ್ಮ ಕೋರ್ಸಿನ ಬೋಧನಾ ಮತ್ತು ಇತರೆ ಶುಲ್ಕ

| | ವಿವರಣೆ | ಶುಲ್ಕ(ರೂ.ಗಳಲ್ಲಿ) ಸರ್ಕಾರಿ ಕಾಲೇಜು | | ಶುಲ್ಕ(ರೂ.ಗಳಲ್ಲಿ) ಸರ್ಕಾರಿ ಸೀಟು ಖಾಸಗಿ ಕಾಲೇಜು | | ಶುಲ್ಕ(ರೂ.ಗಳಲ್ಲಿ) ಖಾಸಗಿ ಕಾಲೇಜುಗಳಲ್ಲಿನ ಇತರೆ ಸೀಟುಗಳು | |
|---|---|---|---|---|---|---|---|
| | | ಹಾಲಿ ಇರುವ ಶುಲ್ಕ | ಪರಿಷ್ಕೃತ ಶುಲ್ಕ | ಹಾಲಿ ಇರುವ ಶುಲ್ಕ | ಪರಿಷ್ಕೃತ ಶುಲ್ಕ | ಹಾಲಿ ಇರುವ ಶುಲ್ಕ | ಪರಿಷ್ಕೃತ ಶುಲ್ಕ |
| 1 | ಬೋಧನಾ ಶುಲ್ಕ | 4,000/– | 5,000/– | 4,000/– | 18,020 | 40000/– | 43,070 |
| 2 | ಪ್ರಯೋಗಾಲಯ ಶುಲ್ಕ | 100/– | 100/– | 100/– | 100/– | 100/– | 100/– |
| 3 | ಶಿಕ್ಷಕರ ಕಲ್ಯಾಣ ನಿಧಿ | 30/– | 30/– | 30/– | 30/– | 30/– | 30/– |
| 4 | ನಿಯತಕಾಲಿಕ (Magzine) ಶುಲ್ಕ | 50/– | 50/– | 50/– | 50/– | 50/– | 50/– |
| 5 | ಅಲುಮಿನಿ ಮಂಡಲಿ ಶುಲ್ಕ | 100/– | 100/– | 100/– | 100/– | 100/– | 100/– |
| 6 | ವೈದ್ಯಕೀಯ ಪರೀಕ್ಷಾ ಶುಲ್ಕ | 50/– | 50/– | 50/– | 50/– | 50/– | 50/– |
| 7 | Caution Money Deposit | 1,000/– | 500/– | 1,000/– | 500/– | 1,000/– | 500/– |
| 8 | ವಿದ್ಯಾರ್ಥಿ ಸಂಘಟನೆ ಶುಲ್ಕ | 400/– | 400/– | 400/– | 400/– | 400/– | 400/– |
| 9 | ಕ್ರೀಡಾ ಶುಲ್ಕ | 100/– | 100/– | 100/– | 100/– | 100/– | 100/– |
| ವಿಶ್ವವಿದ್ಯಾಲಯಕ್ಕೆ ಸಂದಾಯ ಮಾಡಬೇಕಾದ ಶುಲ್ಕ: | | | | | | | |
| 10 | ಪ್ರವೇಶ ಶುಲ್ಕ (ವಿಶ್ವ ವಿದ್ಯಾಲಯ) | 300/– | 300/– | 300/– | 300/– | 300/– | 300/– |
| 11 | ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 2000/– | 2000/– | 2000/– | 2000/– | 2000/– | 2000/– |
| 12 | ಕ್ರೀಡಾ ಶುಲ್ಕ (ವಿಶ್ವ ವಿದ್ಯಾಲಯ) | 800/– | 800/– | 800/– | 800/– | 800/– | 800/– |
| 13 | ವಿದ್ಯಾರ್ಥಿ ಕಲ್ಯಾಣ ನಿಧಿ (ವಿಶ್ವ ವಿದ್ಯಾಲಯ) | 400/– | 400/– | 400/– | 400/– | 400/– | 400/– |
| 14 | ಹೆಲಿನೆಟ್ ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 100/– | 100/– | 100/– | 100/– | 100/– | 100/– |
| 15 | ಹೆಲಿನೆಟ್ ಶುಲ್ಕ (ವಿಶ್ವ ವಿದ್ಯಾಲಯ) | 2000/– | 2000/– | 2000/– | 2000/– | 2000/– | 2000/– |
| **ಒಟ್ಟು ರೂ.ಗಳು** | | **11,430** | **11,930** | **11,430** | **24,950** | **46,930** | **50,000** |

ಶಿಫಾರಸ್ಸು ಮಾಡಲಾಗಿರುವ ಫಾರ್ಮ–ಡಿ ಕೋರ್ಸಿನ ಬೋಧನಾ ಮತ್ತು ಇತರೆ ಶುಲ್ಕ

| ಕ್ರಮ ಸಂಖ್ಯೆ | ವಿವರಣೆ | ಶುಲ್ಕ ರೂ. ಸರ್ಕಾರಿ ಕಾಲೇಜು. | ಶುಲ್ಕ (ರೂ.ಗಳಲ್ಲಿ) ಖಾಸಗಿ ಕಾಲೇಜುಗಳಲ್ಲಿನ ಸರ್ಕಾರಿ ಸೀಟು. | ಶುಲ್ಕ (ರೂ.ಗಳಲ್ಲಿ.) ಖಾಸಗಿ ಕಾಲೇಜಿನ ಇತರೆ ಸೀಟುಗಳು. |
|---|---|---|---|---|
| **1** | ಬೋಧನಾ ಶುಲ್ಕ | 6000 | 40,000 | 1,13,070 |
| **2** | ಪ್ರಯೋಗಾಲಯ ಶುಲ್ಕ | 100/– | 100/– | 100/– |
| **3** | ಶಿಕ್ಷಕರ ಕಲ್ಯಾಣ ನಿಧಿ | 30/– | 30/– | 30/– |
| **4** | ನಿಯತಕಾಲಿಕ (Magzine) ಶುಲ್ಕ | 50/– | 50/– | 50/– |
| **5** | ಅಲುಮಿನಿ ಮಂಡಲಿ ಶುಲ್ಕ | 100/– | 100/– | 100/– |
| **6** | ವೈದ್ಯಕೀಯ ಪರೀಕ್ಷಾ ಶುಲ್ಕ | 50/– | 50/– | 50/– |
| **7** | Caution Money Deposit | 1000 | 500/– | 500/– |
| **8** | ವಿದ್ಯಾರ್ಥಿ ಸಂಘಟನೆ ಶುಲ್ಕ | 400/– | 400/– | 400/– |

| ಕ್ರಮ ಸಂಖ್ಯೆ | ವಿವರಣೆ | ಶುಲ್ಕ ರೂ. ಸರ್ಕಾರಿ ಕಾಲೇಜು. | ಶುಲ್ಕ (ರೂ.ಗಳಲ್ಲಿ) ಖಾಸಗಿ ಕಾಲೇಜುಗಳಲ್ಲಿನ ಸರ್ಕಾರಿ ಸೀಟು. | ಶುಲ್ಕ (ರೂ.ಗಳಲ್ಲಿ.) ಖಾಸಗಿ ಕಾಲೇಜಿನ ಇತರೆ ಸೀಟುಗಳು. |
|---|---|---|---|---|
| 9 | ಕ್ರೀಡಾ ಶುಲ್ಕ | 100/– | 100/– | 100/– |
| **ವಿಶ್ವವಿದ್ಯಾಲಯಕ್ಕೆ ಸಂದಾಯ ಮಾಡಬೇಕಾದ ಶುಲ್ಕ:** | | | | |
| 10 | ಪ್ರವೇಶ ಶುಲ್ಕ (ವಿಶ್ವ ವಿದ್ಯಾಲಯ) | 300 | 300/– | 300/– |
| 11 | ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 2000 | 2,000/– | 2,000/– |
| 12 | ಕ್ರೀಡಾ ಶುಲ್ಕ (ವಿಶ್ವ ವಿದ್ಯಾಲಯ) | 800 | 800/– | 800/– |
| 13 | ವಿದ್ಯಾರ್ಥಿ ಕಲ್ಯಾಣ ನಿಧಿ (ವಿಶ್ವ ವಿದ್ಯಾಲಯ) | 400 | 400/– | 400/– |
| 14 | ಹೆಲಿನೆಟ್ ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 100/– | 100/– | 100/– |
| 15 | ಹೆಲಿನೆಟ್ ಶುಲ್ಕ (ವಿಶ್ವ ವಿದ್ಯಾಲಯ) | 2000 | 2,000/– | 2,000/– |
| | **ಒಟ್ಟು ರೂ.ಗಳು.** | **12,930** | **46,930** | **1,20,000** |

ಮೇಲಿನ ಬೋಧನಾ ಶುಲ್ಕ ಸಲಹಾ ಸಮಿತಿಯ ಶಿಫಾರಸ್ಸನ್ನು ಸರ್ಕಾರವು ಕೂಲಂಕಂಷವಾಗಿ ಪರಿಶೀಲಿಸಿ ವಿದ್ಯಾರ್ಥಿಗಳ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಕೆಳಗಿನ ಮಾನದಂಡಗಳನ್ನು ಅನುಸರಿಸಿ ಪರಿಷ್ಕೃತ ಶುಲ್ಕವನ್ನು ನಿಗದಿಗೊಳಿಸಲು ತೀರ್ಮಾನಿಸಿದೆ.

1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 41 ಎಂ.ಪಿ.ಎಸ್. 2000, ದಿನಾಂಕ: 18.06.2001 ರನ್ವಯ ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯದಲ್ಲಿ ನಿಗದಿಪಡಿಸಿದ ರೂ. 4000/– ಬೋಧನಾ ಶುಲ್ಕವನ್ನು ವಾರ್ಷಿಕ ಹಣದುಬ್ಬರ ಸರಾಸರಿ ಶೇ.5 ಎಂದು ಪರಿಗಣಿಸಿ, ಕಳೆದ 13 ವರ್ಷಗಳಿಂದ ಶುಲ್ಕ ಪರಿಷ್ಕರಿಸದೇ ಇರುವುದರಿಂದ, ಒಟ್ಟು ಶೇ. 65 ರ ಹಣದುಬ್ಬರದ ಅಂಶವನ್ನು ಪರಿಗಣಿಸಲಾಗಿದೆ.

2. ಸರ್ಕಾರಿ ಆದೇಶ ಸಂಖ್ಯೆ: ಆಕುಕ 41 ಎಂ.ಪಿ.ಎಸ್. 2000, ದಿನಾಂಕ: 18.06.2001 ರನ್ವಯ ಖಾಸಗಿ ಔಷಧ ವಿಜ್ಞಾನ ಮಹಾವಿದ್ಯಾಲದಲ್ಲಿರುವ ಸರ್ಕಾರಿ ಕೋಟಾದ ಸೀಟುಗಳಿಗೂ ರೂ. 4000/– ಗಳನ್ನು ನಿಗಧಿಪಡಿಸಲಾಗಿದೆ. ಫಾರ್ಮಸಿ ಕಾಲೇಜುಗಳು ಮತ್ತು ಇಂಜಿನಿಯರಿಂಗ್ ಕಾಲೇಜುಗಳು ಎ.ಐ.ಸಿ.ಟಿ.ಇ.ಯ ವ್ಯಾಪ್ತಿಗೆ ಒಳಪಟ್ಟಿರುವುದರಿಂದ, ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು ಮತ್ತು ಖಾಸಗಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿರುವ ಸರ್ಕಾರಿ ಕೋಟಾದ ಸೀಟುಗಳ ಬೋಧನಾ ಶುಲ್ಕಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿದಾಗ ಅವುಗಳ ಅಂತರ ಶೇ. 112 ಇರುವುದರಿಂದ, ಇದೇ ಮಾನದಂಡವನ್ನು ಬಿ–ಫಾರ್ಮ ಕೋರ್ಸಿಗೂ ಪರಿಗಣಿಸಲಾಗಿದೆ.

3. ದಿನಾಂಕ: 18.06.2001 ರ ಸರ್ಕಾರಿ ಆದೇಶದನ್ವಯ ಖಾಸಗಿ ಕಾಲೇಜುಗಳಲ್ಲಿನ ಆಡಳಿತ ಮಂಡಳಿ ಕೋಟಾ ಸೀಟುಗಳಿಗೆ ನಿಗದಿಪಡಿಸಲಾಗಿದ್ದ ವಾರ್ಷಿಕ ಬೋಧನಾ ಶುಲ್ಕ ರೂ. 40,000/–ವನ್ನು ಸಲಹಾ ಸಮಿತಿ ಶಿಫಾರಸ್ಸಿನಂತೆ ಬೋಧನಾ ಶುಲ್ಕ ರೂ. 43,070/–ಗಳಿಗೆ ಪರಿಷ್ಕರಿಸಲು ಪರಿಗಣಿಸಲಾಗಿದೆ.

4. ಫಾರ್ಮ–ಡಿ ಕೋರ್ಸ್ ಪ್ರಸ್ತುತ ಕೇವಲ ಖಾಸಗಿ ಕಾಲೇಜುಗಳಲ್ಲಿ ಮಾತ್ರ ಇದ್ದು, ಈ ಕೋರ್ಸ್‌ನ್ನು ಫಾರ್ಮಸಿ ಕೌನ್ಸಿಲ್ ಆಫ್ ಇಂಡಿಯಾವು ಏಕೀಕೃತ ಸ್ನಾತಕೋತ್ತರ ಪದವಿ ಎಂದು ಪರಿಗಣಿಸಿದೆ. ಈ ಕೋರ್ಸ್ 10+2ರ ಶಿಕ್ಷಣದ ನಂತರ 06 ವರ್ಷಗಳ ಅಧ್ಯಯನವನ್ನು ಒಳಗೊಂಡಿರುತ್ತದೆ. ಆಗಾಗಿ ಫಾರ್ಮ–ಡಿ ಕೋರ್ಸಿನ ಮೊದಲ 03 ವರ್ಷವನ್ನು ಪದವಿ ಕೋರ್ಸ್ ಎಂದು ಪರಿಗಣಿಸಿ ಬಿ–ಫಾರ್ಮ ಕೋರ್ಸಿಗೆ ನಿಗದಿಪಡಿಸಿರುವ ಬೋಧನಾ ಶುಲ್ಕವನ್ನೇ ಅಳವಡಿಸಲು ಮತ್ತು 04ನೇ ವರ್ಷದಿಂದ ಸ್ನಾತಕೋತ್ತರ ಪದವಿಗೆ ತತ್ಸಮಾನವೆಂದು ಪರಿಗಣಿಸಿ ಸ್ನಾತಕೋತ್ತರ ಕೋರ್ಸಿಗೆ ಅಂದರೆ ಎಂ–ಫಾರ್ಮ ಕೋರ್ಸಿಗೆ ನಿಗದಿಪಡಿಸಿರುವ ಬೋಧನಾ ಶುಲ್ಕವನ್ನೇ ಪರಿಗಣಿಸಲು ನಿರ್ಣಯಿಸಿದೆ.

ಅದರಂತೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಅದೇಶ ಸಂಖ್ಯೆ:ಆಕುಕ 188 ಪಿಟಿಡಿ 2013, ಬೆಂಗಳೂರು, ದಿನಾಂಕ:19.06.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ: ಆಕುಕ 41 ಎಂ.ಪಿ.ಎಸ್. 2000, ದಿನಾಂಕ:18.06.2001ರನ್ವಯ ರಾಜ್ಯದಲ್ಲಿರುವ ಸರ್ಕಾರಿ ಹಾಗೂ ಖಾಸಗಿ ಫಾರ್ಮಸಿ ಕಾಲೇಜುಗಳಲ್ಲಿ ಸರ್ಕಾರಿ ಕೋಟಾ ಮತ್ತು ಖಾಸಗಿ ಕೋಟಾಗಳ ಬಿ–ಫಾರ್ಮ ಕೋರ್ಸಿಗೆ ನಿಗದಿಪಡಿಸಿರುವ ಬೋಧನಾ ಶುಲ್ಕವನ್ನು ಮತ್ತು ಇತರೆ ಶುಲ್ಕವನ್ನು ಪರಿಷ್ಕರಿಸಿ ಹಾಗೂ ಫಾರ್ಮ–ಡಿ ಕೋರ್ಸಿಗೆ ಸಂಬಂಧಿಸಿದಂತೆ ಖಾಸಗಿ ಕಾಲೇಜುಗಳ ಸರ್ಕಾರಿ ಕೋಟಾದ ಸೀಟುಗಳಿಗೆ ಬೋಧನಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು 2014–15ನೇ ಶೈಕ್ಷಣಿಕ ಸಾಲಿನಿಂದ 2018–19ನೇ ಶೈಕ್ಷಣಿಕ ಸಾಲಿನವರೆಗೆ ಅಂದರೆ 05 ವರ್ಷಗಳ ಅವಧಿಯವರೆಗೆ ಜಾರಿಗೆ ಬರುವಂತೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–I ಮತ್ತು II ರಲ್ಲಿ ನಮೂದಿಸಿರುವಂತೆ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕಮಲಮ್ಮ**

ಸರ್ಕಾರದ ಅಧೀನಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾ.ವೈ.ಪ ಮತ್ತು ಸಮನ್ವಯ)

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 188 ಪಿಟಿಡಿ 2013, ದಿನಾಂಕ:19.06.2014 ಕ್ಕೆ ಅನುಬಂಧ– I**

**ಬಿ.ಫಾರ್ಮ ಕೋರ್ಸಿನ ಬೋಧನಾ ಮತ್ತು ಇತರೆ ಶುಲ್ಕ**

| | ವಿವರಣೆ | ಶುಲ್ಕ(ರೂ.ಗಳಲ್ಲಿ) ಸರ್ಕಾರಿ ಕಾಲೇಜು | | ಶುಲ್ಕ(ರೂ.ಗಳಲ್ಲಿ) ಸರ್ಕಾರಿ ಸೀಟು ಖಾಸಗಿ ಕಾಲೇಜು | | ಶುಲ್ಕ(ರೂ.ಗಳಲ್ಲಿ) ಖಾಸಗಿ ಕಾಲೇಜುಗಳಲ್ಲಿನ ಇತರೆ ಸೀಟುಗಳು | |
|---|---|---|---|---|---|---|---|
| | | ಹಾಲಿ ಇರುವ ಶುಲ್ಕ | ಪರಿಷ್ಕೃತ ಶುಲ್ಕ | ಹಾಲಿ ಇರುವ ಶುಲ್ಕ | ಪರಿಷ್ಕೃತ ಶುಲ್ಕ | ಹಾಲಿ ಇರುವ ಶುಲ್ಕ | ಪರಿಷ್ಕೃತ ಶುಲ್ಕ |
| 1 | ಬೋಧನಾ ಶುಲ್ಕ | 4,000/– | 6,600/– | 4,000/– | 14,000 | 40000/– | 43,070/– |
| 2 | ಪ್ರಯೋಗಾಲಯ ಶುಲ್ಕ | 100/– | 100/– | 100/– | 100/– | 100/– | 100/– |
| 3 | ಶಿಕ್ಷಕರ ಕಲ್ಯಾಣ ನಿಧಿ | 30/– | 30/– | 30/– | 30/– | 30/– | 30/– |
| 4 | ನಿಯತಕಾಲಿಕ (Magzine) ಶುಲ್ಕ | 50/– | 50/– | 50/– | 50/– | 50/– | 50/– |
| 5 | ಆಲುಮಿನಿ ಮಂಡಲಿ ಶುಲ್ಕ | 100/– | 100/– | 100/– | 100/– | 100/– | 100/– |
| 6 | ವೈದ್ಯಕೀಯ ಪರೀಕ್ಷಾ ಶುಲ್ಕ | 50/– | 50/– | 50/– | 50/– | 50/– | 50/– |
| 7 | Caution Money Deposit | 1,000/ | 500/– | 1,000/– | 500/– | 1,000/– | 500/– |
| 8 | ವಿದ್ಯಾರ್ಥಿ ಸಂಘಟನೆ ಶುಲ್ಕ | 400/– | 400/– | 400/– | 400/– | 400/– | 400/– |
| 9 | ಕ್ರೀಡಾ ಶುಲ್ಕ | 100/– | 100/– | 100/– | 100/– | 100/– | 100/– |
| | **ವಿಶ್ವವಿದ್ಯಾಲಯಕ್ಕೆ ಸಂದಾಯ ಮಾಡಬೇಕಾದ ಶುಲ್ಕ:** | | | | | | |
| 10 | ಪ್ರವೇಶ ಶುಲ್ಕ (ವಿಶ್ವ ವಿದ್ಯಾಲಯ) | 300/– | 300/– | 300/– | 300/– | 300/– | 300/– |
| 11 | ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 2000/– | 2000/– | 2000/– | 2000/– | 2000/– | 2000/– |
| 12 | ಕ್ರೀಡಾ ಶುಲ್ಕ (ವಿಶ್ವ ವಿದ್ಯಾಲಯ) | 800/– | 800/– | 800/– | 800/– | 800/– | 800/– |
| 13 | ವಿದ್ಯಾರ್ಥಿ ಕಲ್ಯಾಣ ನಿಧಿ (ವಿಶ್ವ ವಿದ್ಯಾಲಯ) | 400/– | 400/– | 400/– | 400/– | 400/– | 400/– |
| 14 | ಹೆಲಿನೆಟ್ ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 100/– | 100/– | 100/– | 100/– | 100/– | 100/– |
| 15 | ಹೆಲಿನೆಟ್ ಶುಲ್ಕ (ವಿಶ್ವ ವಿದ್ಯಾಲಯ) | 2000/– | 2000/– | 2000/– | 2000/– | 2000/– | 2000/– |
| | **ಒಟ್ಟು ರೂ.ಗಳು** | **11,430** | **13,530** | **11,430** | **20,930** | **47,430** | **50,000** |

ಬಿ.ಕಮಲಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ ಮತ್ತು ಸಮನ್ವಯ)

**ಸರ್ಕಾರಿ ಅದೇಶ ಸಂಖ್ಯೆ: ಆಕುಕ 188 ಪಿಟಿಡಿ 2013, ದಿನಾಂಕ:19.06.2014 ಕ್ಕೆ ಅನುಬಂಧ–II**

**ಫಾರ್ಮ–ಡಿ ಕೋರ್ಸಿನ ಬೋಧನಾ ಮತ್ತು ಇತರೆ ಶುಲ್ಕ**

| ಕ್ರಮ ಸಂಖ್ಯೆ | ವಿವರಣೆ | ಶುಲ್ಕ (ರೂ.ಗಳಲ್ಲಿ) ಸರ್ಕಾರಿ ಸೀಟು ಖಾಸಗಿ ಕಾಲೇಜು | |
|---|---|---|---|
| | | ಮೊದಲ ಮೂರು ವರ್ಷ | ನಂತರದ ಮೂರು ವರ್ಷ |
| **1** | ಬೋಧನಾ ಶುಲ್ಕ | 14,000 | 80,000/– |
| **2** | ಪ್ರಯೋಗಾಲಯ ಶುಲ್ಕ | 100/– | 100/– |

| ಕ್ರಮ ಸಂಖ್ಯೆ | ವಿವರಣೆ | ಶುಲ್ಕ (ರೂ.ಗಳಲ್ಲಿ) ಸರ್ಕಾರಿ ಸೀಟು ಖಾಸಗಿ ಕಾಲೇಜು | |
|---|---|---|---|
| | | ಮೊದಲ ಮೂರು ವರ್ಷ | ನಂತರದ ಮೂರು ವರ್ಷ |
| 3 | ಶಿಕ್ಷಕರ ಕಲ್ಯಾಣ ನಿಧಿ | 30/– | 30/– |
| 4 | ನಿಯತಕಾಲಿಕ (Magzine) ಶುಲ್ಕ | 50/– | 50/– |
| 5 | ಅಲುಮಿನಿ ಮಂಡಲಿ ಶುಲ್ಕ | 100/– | 100/– |
| 6 | ವೈದ್ಯಕೀಯ ಪರೀಕ್ಷಾ ಶುಲ್ಕ | 50/– | 50/– |
| 7 | Caution Money Deposit | 500/– | 500/– |
| 8 | ವಿದ್ಯಾರ್ಥಿ ಸಂಘಟನೆ ಶುಲ್ಕ | 400/– | 400/– |
| 9 | ಕ್ರೀಡಾ ಶುಲ್ಕ | 100/– | 100/– |
| **ವಿಶ್ವವಿದ್ಯಾಲಯಕ್ಕೆ ಸಂದಾಯ ಮಾಡಬೇಕಾದ ಶುಲ್ಕ:** | | | |
| 10 | ಪ್ರವೇಶ ಶುಲ್ಕ (ವಿಶ್ವ ವಿದ್ಯಾಲಯ) | 300/– | 300/– |
| 11 | ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 2,000/– | 2,000/– |
| 12 | ಕ್ರೀಡಾ ಶುಲ್ಕ (ವಿಶ್ವ ವಿದ್ಯಾಲಯ) | 800/– | 800/– |
| 13 | ವಿದ್ಯಾರ್ಥಿ ಕಲ್ಯಾಣ ನಿಧಿ (ವಿಶ್ವ ವಿದ್ಯಾಲಯ) | 400/– | 400/– |
| 14 | ಹೆಲಿನೆಟ್ ನೋಂದಣಿ ಶುಲ್ಕ (ವಿಶ್ವ ವಿದ್ಯಾಲಯ) | 100/– | 100/– |
| 15 | ಹೆಲಿನೆಟ್ ಶುಲ್ಕ (ವಿಶ್ವ ವಿದ್ಯಾಲಯ) | 2,000/– | 2,000/– |
| | **ಒಟ್ಟು ರೂ.ಗಳು.** | **20,930** | **86,930/–** |

**ಬಿ.ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ ಮತ್ತು ಸಮನ್ವಯ)

**PR 540**
**SC 200**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ವೃತ್ತಿ ಶಿಕ್ಷಣ ಕೋರ್ಸ್‌ಗಳಿಗೆ ಸಂಬಂಧಿಸಿದಂತೆ ಮಾಡಿಕೊಳ್ಳಲಾಗಿರುವ ಒಪ್ಪಂದದ ಅನುಷ್ಠಾನದ ಮೇಲ್ವಿಚಾರಣೆ ನಡೆಸುವ ಸಲುವಾಗಿ ನೇಮಿಸಲಾದ ಏಕಸದಸ್ಯ ನಿಯಂತಣಾ ಸಮಿತಿಯ ಸದಸ್ಯರ ಷರತ್ತು ಮತ್ತು ನಿಬಂಧನೆಗಳ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 103 ಆರ್‌ಜಿಯು 2011, ದಿನಾಂಕ:06.07.2012
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 142 ಟಿಇಸಿ 2012, ದಿನಾಂಕ:09.08.2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ವೃತ್ತಿ ಶಿಕ್ಷಣ ಕೋರ್ಸ್‌ಗಳಿಗೆ ಸೀಟು ಹಂಚಿಕೆ ಹಾಗೂ ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಸರ್ಕಾರ ಹಾಗೂ ಖಾಸಗಿ ವೈದ್ಯಕೀಯ / ದಂತ ವೈದ್ಯಕೀಯ ಕಾಲೇಜುಗಳ ಸಂಘ (ಕಾಮೆಡ್–ಕೆ) ಹಾಗೂ ಕರ್ನಾಟಕ ಧಾರ್ಮಿಕ ಭಾಷಾ ಅಲ್ಪಸಂಖ್ಯಾತ ವೃತ್ತಿಪರ ಕಾಲೇಜುಗಳ ಸಂಘ (ಕೆ.ಆರ್.ಎಲ್.ಎಂ.ಪಿ.ಸಿ.ಎ) ಇವುಗಳ ನಡುವೆ ಮಾಡಿಕೊಳ್ಳಲಾಗಿರುವ ಒಪ್ಪಂದದ ಅನುಷ್ಠಾನದ ಮೇಲುಸ್ತುವಾರಿಗಾಗಿ ರಚಿತವಾಗಿರುವ **"ಏಕಸದಸ್ಯ ಮೇಲ್ವಿಚಾರಣಾ ಸಮಿತಿ"** ಯ ಸದಸ್ಯರಾಗಿ ಪ್ರೊ. ಪಿ. ವೆಂಕಟರಾಮಯ್ಯ, ನಿವೃತ್ತ ಉಪ ಕುಲಪತಿಗಳು, ಕುವೆಂಪು ವಿಶ್ವವಿದ್ಯಾಲಯ ಇವರನ್ನು ದಿ:06.07.2012 ರಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿತ್ತು.

ತದನಂತರ ಮೇಲೆ ಓದಲಾದ (2)ರ ಆದೇಶದನ್ವಯ ಈಗಾಗಲೇ ಆರೋಗ್ಯ & ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)ಯು ರಚಿಸಲಾದ ಏಕಸದಸ್ಯ ಸಮಿತಿಯ ಸದಸ್ಯರಾದ ಪ್ರೊ. ಪಿ. ವೆಂಕಟರಾಮಯ್ಯ, ನಿವೃತ್ತ ಉಪಕುಲಪತಿಗಳು ಇವರಿಗೆ 2012–13ನೇ ಸಾಲಿನ ಸ್ನಾತಕ ಇಂಜಿನಿಯರಿಂಗ್ ಪ್ರವೇಶಾತಿಗೂ ಸಂಬಂಧಿಸಿದ ಅಂಶಗಳನ್ನು ಪರಿಶೀಲಿಸಿ ಕ್ರಮವಹಿಸಲು ಆದೇಶಿಸಲಾಗಿತ್ತು.

ಮುಂದುವರೆದು, ಮೇಲೆ ಓದಲಾದ (1)ರ ಆದೇಶದಲ್ಲಿ ಸದರಿ ಸಮಿತಿಗೆ ಸಂಬಂಧಿಸಿದಂತೆ ಇತರೆ ಷರತ್ತು ಮತ್ತು ನಿಬಂಧನೆಗಳೊಂದಿಗೆ ಪಾವತಿಸಬಹುದಾದ ಸಂಭಾವನೆಯ ಬಗ್ಗೆ ಪ್ರತ್ಯೇಕವಾದ ಆದೇಶವನ್ನು ಹೊರಡಿಸಲಾಗುವುದೆಂದು ಆದೇಶಿಸಿದ್ದ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 103 ಆರ್‌ಜಿಯು 2011, ಬೆಂಗಳೂರು, ದಿನಾಂಕ:16–06–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರೊ. ಪಿ. ವೆಂಕಟರಾಮಯ್ಯ, ನಿವೃತ್ತ ಉಪಕುಲಪತಿಗಳು ಹಾಗೂ ಏಕಸದಸ್ಯ ಸಮಿತಿಯ ಸದಸ್ಯರು ಇವರಿಗೆ ದಿನಾಂಕ:06–07–2012 ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ವಿಶ್ವವಿದ್ಯಾಲಯದಲ್ಲಿ ಸೇವೆಯಲ್ಲಿರುವ ಉಪಕುಲಪತಿಗಳು ಪಡೆಯುತ್ತಿರುವ ವೇತನ ಹಾಗೂ ಇನ್ನಿತರೆ ಭತ್ಯೆಗಳನ್ನು (ಪಿಂಚಣಿ ಕಳೆದು) ಸಂಭಾವನೆಯೆಂದಾಗಿ ನೀಡಲು ಆದೇಶಿಸಿದೆ. ಮುಂದುವರೆದು, ಸದರಿಯವರು ಉಪಕುಲಪತಿಗಳ ವೇತನದ ಮೇಲೆ ತುಟ್ಟಿಭತ್ಯೆಗೆ ಅರ್ಹರಿದ್ದು, ಪಿಂಚಣಿಯ ಮೇಲೆ ತುಟ್ಟಿಭತ್ಯೆಗೆ ಲಭ್ಯವಿರುವುದಿಲ್ಲ.

ಸದರಿ ಸಂಭಾವನೆಯನ್ನು ಶ್ರೀಯುತರು ಸದರಿ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ ಅವಧಿಗೆ ಸಿ.ಇ.ಟಿ. ಘಟಕದ ನಿಧಿಯಿಂದಲೇ ಭರಿಸುವಂತೆ ಹಾಗೂ ಇದಕ್ಕಾಗಿ ಸರ್ಕಾರದಿಂದ ಯಾವುದೇ ಅನುದಾನವನ್ನು ಕೋರುವಂತಿಲ್ಲ ಎಂಬ ಷರತ್ತಿನೊಂದಿಗೆ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮಹಬೂಬ್ ಖಾನ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ)

**PR. 541**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಕಾರ್ಯಕಾರಿ ಸಮಿತಿ ಪುನರ್ ರಚನೆ ಕುರಿತು

**ಓದಲಾಗಿದೆ :**
1) ಸರ್ಕಾರದ ನಡವಳಿ ಸಂಖ್ಯೆ ಗ್ರಾಅಪ 267 ಪಬವ 2013 ಬೆಂಗಳೂರು ದಿನಾಂಕ 06.08.2013
2) ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 37 ಉಖಾಯೋ 2008 ದಿನಾಂಕ 16.03.2009
3) ದಿನಾಂಕ:17.12.2013 ರಂದು ನಡೆದ ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ಯೋಜನಾ ನಿಧಿ ಸಂಘದ ಕಾರ್ಯಕಾರಿ ಸಮಿತಿ ಸಭೆಯ ನಡವಳಿ ರೀತ್ಯಾ.

**ಪ್ರಸ್ತಾವನೆ:**

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಹಾಗೂ ಸರ್ಕಾರ ವಹಿಸಬಹುದಾದ ಇತರೆ ಗ್ರಾಮೀಣಾಭಿವೃದ್ಧಿ ಯೋಜನೆಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ **"ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ"** ವನ್ನು ಕರ್ನಾಟಕ ಸರ್ಕಾರವು ಮೇಲೆ ಓದಲಾದ ಆದೇಶ (1)ರಲ್ಲಿ ಸೃಜಿಸಿ ಮಂಜೂರು ಮಾಡಿದೆ. ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸಹಕಾರ ಸಂಘಗಳ ಅಧಿನಿಯಮದಡಿ ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ 2ರ ಸರ್ಕಾರದ ಆದೇಶದ ರೀತ್ಯಾ ನೋಂದಣಿ ಮಾಡಿಸಲಾಗಿರುತ್ತದೆ. ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರದ ಆದೇಶದ ರೀತ್ಯಾ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ ಅಸ್ತಿತ್ವಕ್ಕೆ ಬಂದಿರುವ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಕಾರ್ಯಕಾರಿ ಸಮಿತಿ ಪುನರ್ ರಚಿಸುವುದು ಸೂಕ್ತವೆಂದು ದಿನಾಂಕ: 17.12.2013 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ಯೋಜನಾ ನಿಧಿ ಸಂಘದ ಕಾರ್ಯದರ್ಶಿ ಸಭೆಯಲ್ಲಿ ತೀರ್ಮಾನಿಸಲಾಗಿದೆ.

ಆದುದರಿಂದ ಈ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 235 ಉಖಾಯೋ 2011 ಬೆಂಗಳೂರು, ದಿನಾಂಕ:13.05.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಪರಿಗಣಿಸಿ. ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ ಅಸ್ತಿತ್ವಕ್ಕೆ ಬಂದಿರುವ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಕಾರ್ಯಕಾರಿ ಸಮಿತಿಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಪುನರ್‌ರಚಿಸಿ ಆದೇಶಿಸಿದೆ.

| | | |
|---|---|---|
| **1** | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಗ್ರಾ.ಅ ಮತ್ತು ಪಂಚಾಯತ್ ರಾಜ್ ಇಲಾಖೆ– | ಅಧ್ಯಕ್ಷರು. |
| **2** | ಸರ್ಕಾರದ ಕಾರ್ಯದರ್ಶಿ,(ಪಂಚಾಯತ್ ರಾಜ್) ಗ್ರಾ.ಅ.ಮತ್ತು ಪಂ.ರಾಜ್ ಇಲಾಖೆ | ಸದಸ್ಯರು |
| **3** | ಆಯುಕ್ತರು ಗ್ರಾಮೀಣಾಭಿವೃದ್ಧಿ, ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ. | ಸದಸ್ಯರು |
| **4** | ಮುಖ್ಯ ಕಾರ್ಯಾಚರಣೆ ಅಧಿಕಾರಿ,ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, | ಸದಸ್ಯರು |

| | | |
|---|---|---|
| 5 | ನಿರ್ದೇಶಕರು, (ಗುಣ ನಿಯಂತ್ರಣ, ದೂರುಗಳು, ಮಾಹಿತಿ, ಶಿಕ್ಷಣ ಮತ್ತು ಸಂವಹನ, ಜಾಗೃತ) ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ. | ಸದಸ್ಯರು |
| 6 | ವಿಶೇಷ ಆಯುಕ್ತರು (ಅರಣ್ಯ) ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ. | ಸದಸ್ಯರು |
| 7 | ನಿರ್ದೇಶಕರು, ,(ಪಂಚಾಯತ್ ರಾಜ್) ಗ್ರಾ.ಅ.ಮತ್ತು ಪಂ.ರಾಜ್ ಇಲಾಖೆ | ಸದಸ್ಯರು |
| 8 | ನಿರ್ದೇಶಕರು, (ಸಾಮಾಜಿಕ ಪರಿಶೋಧನೆ) ಸಾಮಾಜಿಕ ಪರಿಶೋಧನೆ ನಿರ್ದೇಶನಾಲಯ, ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ. | ಸದಸ್ಯರು |
| 9 | ಮುಖ್ಯ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ. | ಸದಸ್ಯರು |
| 10 | ಜಂಟಿ ನಿರ್ದೇಶಕರು (ಆಡಳಿತ) ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ. | ಸದಸ್ಯ ಕಾರ್ಯದರ್ಶಿ |

ಪುನರ್‌ರಚಿತ ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಕಾರ್ಯಕಾರಿ ಸಮಿತಿಯ ಸಂಘದ ನಿಯಮದಂತೆ ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮಾರ್ಗಸೂಚಿ 2013 ರನ್ವಯ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಬಿ ಮತ್ತು ಸೇವೆಗಳು)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**P.R. 528**

## ENERGY SECRETARIAT

**Sub:** Withdrawal of direction issued under Section 11of Electricity Act 2003 to the Generators in the State for Supply of energy to the State.

**Read:** Government Order No. EN 26 PPC 2014 dated 26th March 2014.

## PREAMBLE:

1. State Government has issued directions to all the Generators in the State of Karnataka that they shall operate and maintain their generating stations to the maximum exportable capacity and shall supply all exportable electricity generated to the State Grid for utilization within the State in public interest with immediate effect vide Government Order read above.

2. As specified in the order read above, the power under Section 11 had been resorted to in view of the extraordinary situation that had arisen because of various factors which lead to an apprehension that there is a serious threat to the Grid security and public interest.

3. The State Government has been monitoring and reviewing the situation continuosly and it is seen that the extraordinary situation which arose resulting in the Government order read above, has ceased to exist in view of various developments.

4. Average infirm power of wind energy injected to the Grid for the month of April-2014 (up to 18.04.2014) is around 4.1MU per day and during peak hours the wind generation is between 250 to 400 MW. It is observed that from the past one week there is a reduction in state consumption to an extent of 25 to 30 MU per day and also reduction in demand to an extent of 800 MW to 1500 MW load. State Load Despatch Centre (SLDC) has been able to maintain the grid discipline as per IEGC Regulations by its actions. All the Electricity Supply Companies (ESCOMs) of the State have opined that there has been reduction in demand.

5. Under the circumstances explained above, the extraordinary situation warranting exercise of power under Section 11 of the Electricity Act 2003 has since ceased to exist at present due to the changed power situation in the State. Hence this order:

**GOVERNMENT ORDER NO.EN 26 PPC 2014. BANGALORE, DATED 28TH APRIL 2014**

In the circumstances explaine in the Preamble, the directions issued vide Government Order No. EN 26 PPC 2014 dated 26th March 2014 in exercise of the powers conferred under section-11 of Electricity Act 2003 in the public interest that all the Generations in the State of Karnataka shall operate and maintain their generating stations to maximum expotable capacity and supply all exportable electricity generated to the State Grid for utilization within the State has been withdrawn with immediate effect.

BY ORDER AND IN THE NAME OF
GOVERNOR OF KARNATAKA,

**K.L.RAMCHANDRA**

DEPUTY SECRETARY TO GOVERNMENT, ENERGY DEPARTMENT,

**P.R. 529**
**SC. 50**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2014-15ನೇ ಸಾಲಿನ ಪ್ರಥಮ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ:ಯೋಇ 64 ಎಸ್‌ಎಸ್‌ಎಂ 2014, ದಿನಾಂಕ:01.04.2014
2) ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ:ಮಪ್ರಮಂ/ನಗದು:ಹ.ಬಿ/ 2014-15, ದಿನಾಂಕ:19.05.2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯನ್ನು 2014-15ನೇ ಸಾಲಿನಲ್ಲಿ ಮುಂದುವರಿಸಲಾಗಿದೆ. 2014-15ನೇ ಸಾಲಿನ ಆಯವ್ಯಯದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಒಟ್ಟು ರೂ.3,800.00 ಲಕ್ಷಗಳನ್ನು ಈ ಕೆಳಕಂಡಂತೆ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | 2515-00-103-0-02-101 (ಸಹಾಯಾನುದಾನ) | 115.00 |
| 2 | 2515-00-103-0-02-132 (ಬಂಡವಾಳ ವೆಚ್ಚ) | 2886.24 |
| 3 | 2515-00-103-0-02-422 (ವಿಶೇಷ ಘಟಕ ಯೋಜನೆ) | 549.10 |
| 4 | 2515-00-103-0-02-423 (ಗಿರಿಜನ ಉಪಯೋಜನೆ) | 249.66 |
| | ಒಟ್ಟು | **3800.00** |

ಮೇಲೆ ಓದಲಾದ ಕ್ರಮಸಂಖ್ಯೆ(2)ರ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇವರು 2014-15ನೇ ಸಾಲಿನ ಪ್ರಥಮ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಯೋಇ 19 ಮಪ್ರಮಂ 2014, ಬೆಂಗಳೂರು, ದಿನಾಂಕ:10.06.2014**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2014-15ನೇ ಸಾಲಿನ ಪ್ರಥಮ ಕಂತಿನ ಅನುದಾನವಾಗಿ ರೂ.950.00 ಲಕ್ಷ (ಒಂಭತ್ತು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | 2515-00-103-0-02-101 (ಸಹಾಯಾನುದಾನ) | 28.750 |
| 2 | 2515-00-103-0-02-132 (ಬಂಡವಾಳ ವೆಚ್ಚ) | 721.560 |
| 3 | 2515-00-103-0-02-422 (ವಿಶೇಷ ಘಟಕ ಯೋಜನೆ) | 137.275 |
| 4 | 2515-00-103-0-02-423 (ಗಿರಿಜನ ಉಪಯೋಜನೆ) | 62.415 |
| | ಒಟ್ಟು | **950.000** |

ಬಿಡುಗಡೆಯಾದ ಈ ಅನುದಾನವನ್ನು ಮಂಡಳಿಯ ಕಾರ್ಯದರ್ಶಿಯವರ ವೈಯಕ್ತಿಕ ಖಾತೆಗೆ ಜಮೆ ಮಾಡಿ, ನಂತರ ಅವಶ್ಯಕತೆಗನುಗುಣವಾಗಿ ಖರ್ಚು ಮಾಡತಕ್ಕದು ಮತ್ತು ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಪಿಡಿ ಖಾತೆಯಲ್ಲಿ ಲಭ್ಯವಿರುವ ಅನುದಾನ ಮತ್ತು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಶೇಕಡ 75 ರಷ್ಟನ್ನು ವೆಚ್ಚ ಭರಿಸಿದ ನಂತರ 2ನೇ ಕಂತಿನ ಅನುದಾನ ಬಿಡುಗಡೆಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಅದೇಶ ಸಂಖ್ಯೆ:ಆಇ 03 ಟಿಎಫ್‌ಪಿ 2014, ದಿನಾಂಕ:04.04.2014 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,1&2(ಪ್ರಭಾರ),
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

PR-531

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಆರ್ಥಿಕ ಸಚಿವಾಲಯ**

**ವಿಷಯ** : ಶ್ರೀ ಮಹಂತಪ್ಪ ಸುಲೇಬಾವಿ, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 124 ರಾಲೆಪ 2014 ಬೆಂಗಳೂರು, ದಿನಾಂಕ:19.06.2014**

ಶ್ರೀ ಮಹಂತಪ್ಪ ಸುಲೇಬಾವಿ, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಪ್ರಧಾನ ಮುಖ್ಯ ಲೆಕ್ಕಾಧಿಕಾರಿಗಳು, ಕೃಷ್ಣ ಭಾಗ್ಯ ಜಲ ನಿಗಮ ನಿಯಮಿತ, ಆಲಮಟ್ಟಿ, ಬಿಜಾಪುರ ಜಿಲ್ಲೆ ಇವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದು ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬಿಜಾಪುರ ಇವರು ದಿನಾಂಕ:28.01.2014ರಂದು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಸಹ ಕಲಂ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ:01/2014ರಲ್ಲಿ ಪ್ರಕರಣ ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುವುದರಿಂದಲೂ,

ಶ್ರೀ ಮಹಂತಪ್ಪ ಸುಲೇಬಾವಿ ಇವರಿಗೆ ಸಂಬಂಧಪಟ್ಟಂತೆ ಮನೆ/ಕಛೇರಿಗಳನ್ನು ಶೋಧನೆ ಮಾಡಿದಾಗ ಆಪಾದಿತ ಸರ್ಕಾರಿ ನೌಕರರ ಆಸ್ತಿ, ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಶೇಕಡಾ 135.60% ರಷ್ಟು ಹೆಚ್ಚುವರಿ ಅಕ್ರಮ ಆಸ್ತಿ ಹೊಂದಿರುತ್ತಾರೆ ಎಂದು ತಿಳಿದುಬಂದಿರುವುದರಿಂದಲೂ,

ಆರೋಪಿಯು ತನಿಖೆಯ ಸಂದರ್ಭದಲ್ಲಿ ಸಾಕ್ಷ್ಯಾಧಾರಗಳನ್ನು ತಿರುಚುವ, ಸಾಕ್ಷ್ಯಾಧಾರಗಳನ್ನು ನಾಶಪಡಿಸಲು ಸಾಧ್ಯತೆ ಇದ್ದು, ಹಾಲಿ ಇವರು ಮತ್ತು ಇವರ ಕುಟುಂಬದ ಹೆಸರಿನಲ್ಲಿ ರೂ.67,80,109/–ರಷ್ಟು ಚರಾಸ್ತಿ ಮತ್ತು ಸ್ಥಿರಾಸ್ತಿ ಪತ್ತೆಯಾಗಿದ್ದು ಆಪಾದಿತರ ಅಕ್ರಮವಾಗಿ ಸಂಪಾದಿಸಿರುವ ಚರಾಸ್ತಿ ಮತ್ತು ಸ್ಥಿರಾಸ್ತಿಗಳ ಮೌಲ್ಯ ಇನ್ನೂ ಹೆಚ್ಚಾಗುವ ಸಂಭವವಿರುತ್ತದೆ. ಶ್ರೀ ಮಹಂತಪ್ಪ ಇರಬಸಪ್ಪ ಸೂಳಿಭಾವಿ, ಪ್ರಧಾನ ಮುಖ್ಯ ಲೆಕ್ಕಾಧಿಕಾರಿಗಳು, ಕೃಷ್ಣ ಭಾಗ್ಯ ಜಲ ನಿಗಮ ನಿಯಮಿತ, ಆಲಮಟ್ಟಿ, ಬಿಜಾಪು ಜಿಲ್ಲೆ ರವರು ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 13(1)(ಇ) ಜೊತೆ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬಂದಿರುವುದರಿಂದಲೂ, ತನಿಖಾಧಿಕಾರಿಯವರು ಆಪಾದಿತರಿಗೆ ಸಂಬಂಧಿಸಿದ ಹಲವಾರು ಸ್ಥಿರಾಸ್ತಿ–ಚರಾಸ್ತಿಗಳು ಮತ್ತು ಸಂಬಂಧಿಸಿದ ದಾಖಲೆಗಳನ್ನು ವಶಪಡಿಸಿಕೊಂಡಿರುವುದರಿಂದಲೂ,

1) ಆಪಾದಿತ ಅಧಿಕಾರಿಯವರು ವಾಸಿಸುತ್ತಿರುವ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಆಲಮಟ್ಟಿ ವಸತಿ ಗೃಹದ ಶೋಧನೆ ವಾರೆಂಟ್ ಜಾರಿ ಮಾಡಲು ಶ್ರೀ ಜಗದೀಶ ಹಂಚನಾಳ, ಪೊಲೀಸ್ ಇನ್ಸ್‌ಪೆಕ್ಟರ್, ಕಲೋ, ವಿಜಾಪುರ ರವರ ಹೆಸರಿನಲ್ಲಿ ನೀಡಿದ್ದು ಇರುತ್ತದೆ.

2) ಆಪಾದಿತ ಅಧಿಕಾರಿಯವರು ಸೇವೆ ಸಲ್ಲಿಸುತ್ತಿರುವ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಆಲಮಟ್ಟಿ ಕಚೇರಿಯ ಪ್ರಧಾನ ಲೆಕ್ಕ ಪರಿಶೋಧನೆ ಅಧಿಕಾರಿ ಚೆಂಬರಿನ ಶೋಧನೆ ವಾರೆಂಟ್ ಜಾರಿ ಮಾಡಲು ಶ್ರೀ ಎಸ್.ಪಿ. ತೋಳಮಟ್ಟಿ, ಪೊಲೀಸ್ ಉಪಾಧೀಕ್ಷಕರು, ಕಲೋ, ವಿಜಾಪುರ ರವರ ಹೆಸರಿನಲ್ಲಿ ನೀಡಿದ್ದು ಇರುತ್ತದೆ.

3) ಆಪಾದಿಯ ಅಧಿಕಾರಿಯವರ ತಾಯಿ ಶ್ರೀಮತಿ ಗುರುಲಿಂಗಮ್ಮ ಸೂಳಭಾವಿ ಮತ್ತು ಅವರ ಸಹೋದರ ಹೆಸರಿನಲ್ಲಿರುವ ಬಾಗಲಕೋಟ ಜಿಲ್ಲೆಯ ಇಲಕಲ ಸಿಟಿಎಸ್ ನಂ:1970/ಎ, ಖೀಲ್ಲಾ ಓಣಿಯಲ್ಲಿರುವ ಮನೆಯ ಶೋಧನೆ ವಾರೆಂಟ್ ಜಾರಿ ಮಾಡಲು ಶ್ರೀ ನಂದೀಶ್ವರ ಬ ಕುಂಬಾರ, ಪೊಲೀಸ್ ಇನ್ಸ್‌ಪೆಕ್ಟರ್, ಕಲೋ, ವಿಜಾಪುರ ರವರ ಹೆಸರಿನಲ್ಲಿ ನೀಡಿದ್ದು ಇರುತ್ತದೆ.

4) ಆಪಾದಿತ ಅಧಿಕಾರಿಯವರು ಈ ಮೊದಲು ವಾಸವಿದ್ದ ಬೆಳಗಾವಿಯ ವಿಶ್ವೇಶ್ವರಯ್ಯ ನಗರದಲ್ಲಿರುವ ಎಇಇ, ಲೋಕೋಪಯೋಗಿ ಇಲಾಖೆಯ ವಸತಿ ಗೃಹ ನಂ:ಸಿ–2–15 ನೇದ್ದರ ಮನೆಯ ಶೋಧನೆ ವಾರೆಂಟ್ ಜಾರಿ ಮಾಡಲು ಶ್ರೀ ಜಗದೀಶ ಹಂಚನಾಳ,ಪೊಲೀಸ್ ಇನ್ಸ್‌ಪೆಕ್ಟರ್, ಕಲೋ, ವಿಜಾಪುರ ರವರ ಹೆಸರಿನಲ್ಲಿ ನೀಡಿದ್ದು ಇರುತ್ತದೆ.

ಶ್ರೀ ಮಹಂತಪ್ಪ ಸುಲೇಬಾವಿ ಅವರ ವಿರುದ್ಧ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗದಿಂದ ಮೊಕದ್ದಮೆಯು ದಾಖಲಿಸಲ್ಪಟ್ಟು ತನಿಖೆ ನಡೆಯುತ್ತಿರುವುದರಿಂದಲೂ,

ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗ ತನಿಖೆಯನ್ನು ಕಾಯ್ದಿಟ್ಟು ಶ್ರೀ ಮಹಂತಪ್ಪ ಸುಲೇಬಾವಿ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಎಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಂತಪ್ಪ ಸುಲೇಬಾವಿ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಪ್ರಸ್ತುತ ಪ್ರಧಾನ ಮುಖ್ಯ ಲೆಕ್ಕಾಧಿಕಾರಿಗಳು, ಕೃಷ್ಣ ಭಾಗ್ಯ ಜಲ ನಿಗಮ ನಿಯಮಿತ, ಆಲಮಟ್ಟಿ, ಬಿಜಾಪುರ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ/ ಕ್ರಿಮಿನಲ್ ಮೊಕದ್ದಮೆಯನ್ನು ಕಾಯ್ದಿಟ್ಟು, ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಮಹಂತಪ್ಪ ಸುಲೇಬಾವಿ, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಮಹಂತಪ್ಪ ಸುಲೇಬಾವಿ, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಲೀನ್ ಅನ್ನು ಆರ್ಥಿಕ ಅಧಿಕಾರಿ, ಬೀದರ್ ಮೆಡಿಕಲ್ ಕಾಲೇಜು, ಬೀದರ್ ಇಲ್ಲಿಗೆ ವರ್ಗಾಯಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಮಹಂತಪ್ಪ ಸುಲೇಬಾವಿ ಅವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**PR-532**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59